ಹೊಸ ಅಭ್ಯಾಸಪತ್ರಿಕೆಯನ್ನು ಅನುಸರಿಸಿ ಬರೆದ

# ಅಂಕಗಣಿತ

(ಭೂಮಿತಿ ಸಹಿತ)

(೩ ನೆಯ ಇಯತ್ತೆಗಾಗಿ)



ಬರೆದವರು:

**ಬೋಧೋ ಶ್ರೀನಿವಾಸ ಪುರೋಹಿತ ಬಿ. ಎ.,**



ಮೂರನೆಯ ಆವೃತ್ತಿ

**೧೯೩೫**



**ಬೆಲೆ ೫ ಆಣೆ.**

# ಮು ನ್ನು ಡಿ

ಅಂಕಗಣಿತದ ಸುಧಾರಿಸಿದ ಅಭ್ಯಾಸಪತ್ರಿಕೆಯ ಮೇರೆಗೆ ೩ ನೆಯ ಇಯತ್ತೆಯ ಹುಡುಗರಿಗಾಗಿ ಈ ಪುಸ್ತಕವು ಬರೆಯಲ್ಪಟ್ಟದೆ. ಇದನ್ನು ಬರೆಯುವಾಗ ಲಕ್ಷದಲ್ಲಿಟ್ಟ ಮುಖ್ಯ ಮಾತುಗಳು ಯಾವವೆಂದರೆ :—

೧. ಹಿಂದೆ ಕಲಿತ ವಿಷಯದ ಉಜಳಣಿ ಮಾಡಿ ಹೊಸ ವಿಷಯಕ್ಕೆ ಸಾಗುವದು.

೨. ಯಾವ ಮಾತನ್ನೂ ಯಾಂತ್ರಿಕವಾಗಿ ಹೇಳದೆ, ವಸ್ತು, ಆಕೃತಿ ಇಲ್ಲವೆ ಉದಾಹರಣಗಳ ಸಹಾಯದಿಂದ ಹುಡುಗರಿಗೆ ಮನದಟ್ಟಾಗುವಂತೆ ತಿಳಿಸುವದು.

೩. ಪಾಟಿಯಮೇಲೆ ಲೆಕ್ಕಮಾಡುವ ಮೊದಲು, ಬಾಯಿಂದ ಸಣ್ಣ ಸಣ್ಣ ಲೆಕ್ಕಗಳನ್ನು ಬಿಡಿಸುವದು.

೪. ವ್ಯವಹಾರದ ಲೆಕ್ಕಗಳಿಗೆ ಸಾಕಷ್ಟು ಮಹತ್ವಕೊಡುವದು.

೫. ಹುಡುಗರಿಗೆ ಮನವರಿಕೆಯಾಗುವ ವಿಶೇಷ ಕ್ರಮದಿಂದ ವಿಷಯದಲ್ಲಿ ಸಹಜವೂ ಸುಲಭವೂ ಆದ ಮೆಟ್ಟಗಳನ್ನು ಮಾಡುವದು.

೬. ಉತ್ತರವು ಸರಿಯೆಂದು ಖಾತ್ರಿಮಾಡಿಕೊಳ್ಳಲಿಕ್ಕೆ ತಾಳೇ ನೋಡುವ ಚಟ ಹಚ್ಚುವದು.

ಈ ಪುಸ್ತಕದಲ್ಲಿ ಅಂಕಗಣಿತ ಹೊಸ ಅಭ್ಯಾಸಪತ್ರಿಕೆಯಲ್ಲಿ ೩ನೆಯ ಇಯತ್ತೆಗಾಗಿ ಕೊಟ್ಟ ಎಲ್ಲ ವಿಷಯಗಳು ಇವೆ. ಅಪೂರ್ಣಾಂಕ, ತ್ರೈರಾಶಿಕ, ಸ್ಕೇಲಡ್ರಾಯಿಂಗ. ವರ್ತುಳವನ್ನು ತೆಗೆಯುವದು, ಮೊದಲಾದವುಗಳನ್ನು ಹುಡುಗರಿಗೆ ಎಷ್ಟು ಮತ್ತು ಹ್ಯಾಗೆ ಕಲಿಸಬೇಕೆಂಬದು ಇದನ್ನು ಓದಿದರೆ ಶಿಕ್ಷಕರಿಗೆ ಗೊತ್ತಾಗುವದು. ಸದ್ಯದ ಇಯತ್ತಾಪತ್ರಿಕೆಯನ್ನು ಪೂರ್ಣವಾಗಿ ಅನುಸರಿಸಿ ಬರೆದ ಪುಸ್ತಕವು ಇದೇ ಮೊದಲನೆಯದಾಗಿದೆ.

ಶಿಕ್ಷಣ ಶಾಸ್ತ್ರದ ನಿಯಮಕ್ಕೆ ತಕ್ಕಂತೆ ಲೆಕ್ಕಗಳ ಉತ್ತರವನ್ನು ಕೊಟ್ಟಿರುವದಿಲ್ಲ. ಸುಲಭರೀತಿಯಿಂದ ತಾಳೆ ಮೊದಲಾದವುಗಳನ್ನು ನೋಡಿ

ಉತ್ತರವು ಸರಿಯಿರುವದೆಂದು ಖಾತ್ರಿಮಾಡಿಕೊಳ್ಳುವ ಚಟವು ಪ್ರಾರಂಭದಿಂದ ಬಾಲಕರಲ್ಲಿ ನೆಲೆಗೊಂಡರೆ ಬಹಳ ಉಪಯೋಗವಾಗುವದು.

ಗಣಿತದ ಆರಂಭದ ಮೆಟ್ಟುಗಳು ಬಹಳ ಮಹತ್ವವಾದಂಥವು. ಅವುಗಳ ಕಡೆಗೆ ಶಿಕ್ಷಕರ ಲಕ್ಷ್ಯವು ಸಾಕಷ್ಟು ಹೋಗಬೇಕೆಂಬುದೇ ನಮ್ಮ ಆಶೆ. ಈ ಚಿಕ್ಕ ಪುಸ್ತಕದಿಂದ ಶಿಕ್ಷಕರಲ್ಲಿ ಕಲಿಸುವ ಹುರುಪೂ ಹುಡುಗರಲ್ಲಿ ಕಲಿಯುವ ಹುರುಪೂ ತುಂಬಾ ಹುಟ್ಟಲೆಂದು ಆಶಿಸುತ್ತೇವೆ. ಶಿಕ್ಷಕ ಬಾಂಧವರು ಸೂಚನೆಗಳನ್ನು ತಿಳಿಸಿದರೆ ಉಪಕೃತರಾಗುವೆವು. ಹಿಂದಿನ ಆವೃತ್ತಿಯಲ್ಲಿ ಕಂಡು ಬಂದ ಕೊರತೆಗಳನ್ನು ಈ ಆವೃತ್ತಿಯಲ್ಲಿ ಕೆಲಮಟ್ಟಿಗೆ ಸುಧಾರಿಸಿದ್ದೇವೆ. ಮುಂದಿನ ಆವೃತ್ತಿಯಲ್ಲಿ ಹೆಚ್ಚು ಪಡಿಯಚ್ಚುಗಳನ್ನು ಹಾಕುವ ವಿಚಾರವದೆ.

ಈ ಕೆಲಸದಲ್ಲಿ ನಮಗೆ ಮನಮುಟ್ಟಿ ಸಹಾಯ ಮಾಡಿದ ಮಿತ್ರ ಬಾಂಧವರಿಗೆ ನಾವು ತುಂಬಾ ಋಣಿಯಾಗಿದ್ದೇವೆ. ಇದರಲ್ಲಿಯ ಪಡಿಅಚ್ಚುಗಳ ಬಗ್ಗೆ ಶ್ರೀಯುತ ಪೋತದಾರ ಶ್ರೀನಿವಾಸರಾಯರನ್ನೂ, ಅಂದವಾದ ಮುದ್ರಣದ ಬಗ್ಗೆ ಕರ್ನಾಟಕ ಪ್ರಿಂಟಿಂಗ ಪ್ರೆಸ್ಸಿನ ಮಾಲಕರಾದ ಶ್ರೀಯುತ ಜಠಾರ ಯಶವಂತರಾಯರನ್ನೂ ಅಭಿನಂದಿಸುತ್ತೇವೆ.

**ಧಾರವಾಡ,**
**೮–೩–೧೯೩೩** } **ಬಿ. ಎಸ್. ಪುರೋಹಿತ.**

# ವಿಷಯ

ವಾಗ್ವಿಲಾಸ ಬುಕ್‌ಡಿಪೋವಲ್ಲಿ ಕೆಳಗೆ ಬರೆದ ಪುಸ್ತಕಗಳು ಸಿಗುತ್ತವೆ. ವ್ಯಾಪಾರಸ್ಥರಿಗೆ ಮತ್ತು ಶಾಲಾಮಾಸ್ತರರಿಗೆ ಯೋಗ್ಯ ಕಮೀಶನ್ ಕೊಡುತ್ತೇವೆ. ವ್ಹಿ.ಪಿ.ಯಿಂದ ತರಿಸಿಕೊಳ್ಳಬಹುದು.

| | | | | |
|---|---|---|---|---|
| ಹಿಂದುಸ್ತಾನದ ಇತಿಹಾಸ | ( ಬಸವನಾಳ ) | ೧ | ೮ | ೦ |
| ಹಿಂದುಸ್ತಾನದ ಭೂಗೋಲ | ( ಮುಗದಾಳ ) | ೦ | ೮ | ೦ |
| ಏಶಿಯಾದ ಭೂಗೋಲ | ( ,, ) | ೦ | ೯ | ೦ |
| ಧಾರವಾಡ ಜಿಲ್ಹೆಯ ಭೂಗೋಲ | ( ಕುರಡಿ ) | ೦ | ೫ | ೦ |
| ಅಂಕಗಣಿತ ೨ನೆಯ ಇಯತ್ತೆಗಾಗಿ | ( ಪುರೋಹಿತ ) | ೦ | ೪ | ೦ |
| ಅಂಕಗಣಿತ ೩ನೆಯ ಇಯತ್ತೆಗಾಗಿ | ( ,, ) | ೦ | ೫ | ೦ |
| ಅಂಕಗಣಿತ ೪ನೆಯ ಇಯತ್ತೆಗಾಗಿ | ( ,, ) | ೦ | ೬ | ೦ |
| ಜಮಾಖರ್ಚು | ( ಸೇಗಿನಹಾಳ ) | ೦ | ೧೨ | ೦ |
| ನುಡಿಗನ್ನಡಿ ೨ನೆಯ ಭಾಗ | ( ಪೂಜಾರ ) | ೦ | ೪ | ೦ |
| ನುಡಿಗನ್ನಡಿ ೩ನೆಯ ಭಾಗ | ( ,, ) | ೦ | ೧೦ | ೦ |
| ಸುಲಭ ವ್ಯಾಕರಣ | ( ರಂಗಾಪುರ ) | ೦ | ೪ | ೦ |
| ಲಘುವ್ಯಾಕರಣ | ( ಕಟ್ಟೀಕೃತ ) | ೦ | ೨ | ೦ |
| ಭೂಗೋಲವಿದ್ಯೆ | ( ,, ) | ೦ | ೫ | ೦ |
| ಕರ್ನಾಟಕ ಬಾಲಬೋಧೆ | ( ಕರಿಬಸವಶಾಸ್ತ್ರಿ ) | ೦ | ೨ | ೦ |
| ಶಾಸ್ತ್ರೀಯ ವಿಷಯ | ( ನಾಡಿಗೇರ ) | ೦ | ೪ | ೦ |
| ಭೂಗೋಲ ಸಂಗ್ರಹ | ( ,, ) | ೦ | ೧೨ | ೦ |
| ಕರ್ನಾಟಕ ಇತಿಹಾಸ | ( ರಾಜಪುರೋಹಿತ ) | ೦ | ೮ | ೦ |

ಮೇಲೆ ಬರೆದ ಪುಸ್ತಕಗಳ ಸೋಲ ಏಜಂಟರೂ ಕೆಲವುಗಳ ಪಬ್ಲಿಶರರೂ ನಾವೇ ಇರುತ್ತೇವೆ. ಆದ್ದರಿಂದ ಪತ್ರವ್ಯವಹಾರವನ್ನು ನಮ್ಮ ಕಡೆಗೆ ಮಾಡಬೇಕು.

**ವಿ. ಆರ್. ಶಿವನಾಗಪ್ಪಾ,**

ವಾಗ್ವಿಲಾಸ ಬುಕ್‌ಡಿಪೊ ಹಾಗು ಪಾವರ ಪ್ರಿಂಟಿಂಗ ಪ್ರೆಸ್ಸ

ದುರ್ಗದ ಬೈಲ **ಹುಬ್ಬಳ್ಳಿ.**

# ಅಂಕಗಣಿತ

## ( ೩ನೆಯ ಇಯತ್ತೆಗಾಗಿ )

---

## ಸಂಖ್ಯಾವಾಚನವೂ ಸಂಖ್ಯಾಲೇಖನವೂ

( ಉಜಳಣಿ )

**೧೦** ದಶಸಹಸ್ರ ಅಂದರೆ ೧ ಲಕ್ಷ = **೧೦೦೦೦೦.**

### ಲೆಕ್ಕಗಳ ಗುಂಪು:— ೧.

೧. ಒಂದು ಲಕ್ಷದಲ್ಲಿ **ಅ.** ಸಹಸ್ರಗಳು ಎಷ್ಟು ? **ಬ.** ಶತಕಗಳು ಎಷ್ಟು ?

**೨.** ಅಂಕೆಗಳಿಂದ ಬರೆಯಿರಿ. **ಅ.** ಐದು ಲಕ್ಷ. **ಬ.** ಒಂದು ಲಕ್ಷ ಇಪ್ಪತ್ತೈದು ಸಾವಿರದ ಮೂರು ನೂರ ಎಪ್ಪತ್ತೈದು. **ಕ.** ಎಂಟು ಲಕ್ಷ ಹದಿನೇಳು ಸಾವಿರದ ಐದುನೂರ ಮೂವತ್ತಾರು. **ಡ.** ಒಂಬತ್ತು ಲಕ್ಷ ಐದು ಸಾವಿರದ ಅರವತ್ತೆಂಟು.

**೩.** ಶಬ್ದಗಳಲ್ಲಿ ಬರೆಯಿರಿ. **ಅ. ೭೫೬೯೨೦** ಬ. **೮೫೦೪೫೨**
**ಕ. ೮೫೭೦೯೦** ಡ. **೫೦೬೯೨೫** ಇ. **೪೦೦೭೦೫**

**೪.** ಮೇಲಿನ ಸಂಖ್ಯೆಗಳಲ್ಲಿ **೫** ಈ ಅಂಕೆಯ ಸ್ಥಾನದ ಬೆಲೆಗಳನ್ನು ಬರೆಯಿರಿ.

**೫.** ಒಂದು ಲಕ್ಷದಲ್ಲಿ **ಅ.** ಒಂದು ನೂರು **ಬ.** ಒಂದು ಸಾವಿರ ಮತ್ತು ಐದನೂರು **ಕ.** ಹದಿನೈದು ಸಾವಿರದ ಏಳು ನೂರು ಕೂಡಿಸಿದರೆ ಆಗುವ ಸಂಖ್ಯೆಗಳನ್ನು ಬರೆಯಿರಿ.

**೧೦** ಲಕ್ಷ ಅಂದರೆ ೧ ದಶಲಕ್ಷ = **೧೦೦೦೦೦೦.** ದಶಲಕ್ಷ ಮತ್ತು ಲಕ್ಷ ಇವುಗಳನ್ನು ಕೂಡಿಸಿ ಓದಬೇಕು. **೧೦** ದಶಲಕ್ಷ = ೧ ಕೋಟಿ.
**೨೩೫೦೪೦೦೫** ಈ ಸಂಖ್ಯೆಯನ್ನು ಎರಡು ಕೋಟಿ ಮೂವತ್ತೈದು ಲಕ್ಷ ನಾಲ್ಕು ಸಾವಿರದ ಐದು ಎಂದು ಓದುವರು.

### ಲೆಕ್ಕಗಳ ಗುಂಪು:— ೨.

೧. ಒಂದು ದಶಲಕ್ಷದಲ್ಲಿ ಹಾಗು ಒಂದು ಕೋಟಿಯಲ್ಲಿ **ಅ.** ದಶಸಹಸ್ರಗಳು **ಬ.** ಸಹಸ್ರಗಳು **ಕ.** ನೂರರ ಗಂಟು (ಶತಕ) ಗಳು ಎಷ್ಟು ಇರುವವು?

೨. ೧ ಕೋಟಿ ರೂ. ಕೊಟ್ಟು **ಅ. ೧೦** ರೂ. **ಬ. ೧೦೦** ರೂ. **ಕ. ೧೦೦೦** ರೂ. ಗಳ ನೋಟು ತಂದರೆ ಎಷ್ಟೆಷ್ಟು ನೋಟು ಬರುವವು ?

೩. ಶಬ್ದಗಳಲ್ಲಿ ಬರೆಯಿರಿ. **ಅ. ೧೫೩೦೪೨೮** ಹಂಚು. **ಬ. ೧೨೦೮೨೨೫** ರೂ. **ಕ. ೨೬೪೫೦೦೦** ಜನರು. **ಡ. ೩೬೫೦೨೩೯** ಇಟ್ಟಂಗಿಗಳು.

೪. ಮೇಲಿನ ಲೆಕ್ಕದಲ್ಲಿ **೫, ೨** ಈ ಅಂಕೆಗಳ ಬೆಲೆಯನ್ನು ಬರೆಯಿರಿ.

೫. **ಅಂಕೆಯಲ್ಲಿ ಬರೆಯಿರಿ. ಅ.** ಎಪ್ಪತ್ತೆಂಟು ಲಕ್ಷ ಎಂಬತ್ತೈದು ಸಾವಿರದ ಒಂದು ನೂರ ಮೂವತ್ತಾರು. **ಬ.** ಒಂಬತ್ತು ಲಕ್ಷ ತೊಂಬತ್ತೊಂಬತ್ತು ಸಾವಿರದ ಒಂಬತ್ತು ನೂರ ತೊಂಬತ್ತೊಂಬತ್ತು. **ಕ.** ಮೂವತ್ತೇಳು ಲಕ್ಷ ನಾಲ್ವತ್ತೈದು ಸಾವಿರದ ಏಳನೂರ ಮೂರು. **ಡ.** ನಾಲ್ವತ್ನಾಲ್ಕು ಲಕ್ಷ ಅರವತ್ತೆಂಟು ಸಾವಿರದ ಐವತ್ತೈದು. **ಇ.** ಹದಿನೆಂಟು ಲಕ್ಷ ಮೂರು ಸಾವಿರದ ಎಂಟು ನೂರ ಐವತ್ತು.

---

# ಬೇರೀಜು

**ಮಾದರಿಯ ಲೆಕ್ಕ :-** ೧. ಮುಂಬಯಿ ಇಲಾಖೆಯಲ್ಲಿ **೨೦೮೯೩** ಸೀಕರು, **೨೦೦೦೧೫** ಜೈನರು, **೮೯೫೪೪** ಪಾರ್ಸಿಗಳು ಹಾಗು **೩೧೭೦೪೨** ಕ್ರಿಸ್ತರು ಇದ್ದಾರೆ. ಎಲ್ಲರೂ ಕೂಡಿ ಎಷ್ಟು ಜನರಾಗುವರು ?

ಇಲ್ಲಿ ಜನರ ಒಟ್ಟು ಸಂಖ್ಯೆ ಬೇಕಾಗಿದೆ. ಆದ್ದರಿಂದ ಬೇರೀಜು.

| | |
|---|---|
| **೨೦೮೯೩** ಸೀ. | |
| **೨೦೦೦೧೫** ಜೈ. | |
| **೮೯೫೪೪** ಪಾ. | |
| **೩೧೭೦೪೨** ಕ್ರಿ. | |
| **೬೨೭೪೯೪** ಜ. | |

**ಲೆಕ್ಕಗಳ ಗುಂಪು :- ೩.** ( ಬಾಯಿಲೆಕ್ಕ )

೧. ಒಂದು ಪೆಟ್ಟಿಗೆಯಲ್ಲಿ **೧** ಲಕ್ಷ **೮** ಸಾವಿರ ರೂ. ಮತ್ತೊಂದರಲ್ಲಿ **೮೦** ಸಾವಿರ ರೂಪಾಯಿ ಅವೆ. ಒಟ್ಟು ಎಷ್ಟು ರೂಪಾಯಿ ಆಗುವವು ?

೨. ಒಂದು ತಾಲೂಕಿನಲ್ಲಿ **೫** ಊರುಗಳ ಜನಸಂಖ್ಯೆಯು **೫** ಸಾವಿರ, **೫** ಸಾವಿರದ **೨** ನೂರು, **೫** ಸಾವಿರದ **೩** ನೂರು, **೫** ಸಾವಿರದ **೪** ನೂರು, **೫** ಸಾವಿರದ **೫** ನೂರು ಇದೆ. ಐದೂ ಊರುಗಳಲ್ಲಿ ಒಟ್ಟು ಜನರೆಷ್ಟು ?

೩. **೫೦೧** ರಿಂದ **೫೦೫** ರ ವರೆಗಿನ ಎಲ್ಲ ಸಂಖ್ಯೆಗಳ ಬೇರೀಜು ಎಷ್ಟು ?

೪. **ಅ. ೧೨೨** ರಲ್ಲಿ **೮** ರಂತೆ ಕೂಡಿಸುತ್ತ **೧೯೨** ರ ವರೆಗೆ **ಬ. ೧೨** ರಲ್ಲಿ **೯** ರಂತೆ ಕೂಡಿಸುತ್ತ **೯೩** ರ ವರೆಗೆ ಎಣಿಸಿರಿ.

೫. ೧ ಬಿಡಿಕಾಳು, ೨ ನೂರರ ಗಂಟು, ೧ ದಶಸಹಸ್ರದ ಗಂಟು, ಒಂದು ದಶಲಕ್ಷದ ಗಂಟು ನನ್ನಲ್ಲಿ ಅವೆ. ಎಲ್ಲ ಕೂಡಿ ಎಷ್ಟಾಗುವವು ?

**ಲೆಕ್ಕಗಳ ಗುಂಪು:— ೪.** (ಉತ್ತರ ಸರಿಯೆಂದು ತಾಳೇ ನೋಡಿರಿ)

೧. ಐವತ್ತೇಳು ಸಾವಿರದ ಎಂಟು ನೂರ ಐವತ್ತು; ಒಂದು ಲಕ್ಷ ಹತ್ತೊಂಬತ್ತು ಸಾವಿರದ ಮೂವತ್ತೆಂಟು; ಮೂರು ಲಕ್ಷ ನಾಲ್ಕು ಸಾವಿರದ ಮೂರು; ಇವುಗಳ ಬೇರಿಜು ಮಾಡಿರಿ.

೨. **೧೬೦೮ + ೩೦೯೬ + ೧೦೯೬೫ + ೮೫೭೦೦೩೫ = ?**

೩. **೫೮೩೭೧ + ೧೯೪೦೬ + ೧೨೦೮೬೧ + ೧೦೪೫ = ?**

ಕೆಳಗಿನ ಸಂಖ್ಯೆಗಳ ಅಡ್ಡ ಉದ್ದ ಬೇರೀಜು ಮಾಡಿ ತಾಳೇ ನೋಡಿರಿ.

| | ೪. | ೫. | ೬. |
|---|---|---|---|
| ೭. | **೮೬೭೦೬೧೯** | **೯೫೦೪೦೭** | **೮೩೭೫೪೦೦** |
| ೮. | **೩೮೫೦೩೬** | **೪೬೮೧೪೬** | **೫೦೩೬೦೪೮** |
| ೯. | **೧೦೦೫೦೩** | **೨೦೫೬೭೮** | **೪೮೦೪೧೫** |
| ೧೦. | **೯೦೪೨೫** | **೧೯೮೦೩** | **೩೭೦೨೬** |

| | ೧೭. | ೧೮. | ೧೯. |
|---|---|---|---|
| ೧೧. | **೧೪೭೦೩೫** | **೮೦೫೦೦೮** | **೩೦೦೫೮೩೨** |
| ೧೨. | **೨೮೪೦೫** | **೮೭೮೧೪** | **೫೨೦೯೪೫** |
| ೧೩. | **೩೬೦೦೩** | **೧೩೪೦೪೦** | **೮೧೭೫೦೩** |
| ೧೪. | **೯೩** | **೨೦೫೬೮೭** | **೩೮೦೦೮** |
| ೧೫. | **೩೦೮೫** | **೧೦೧೫** | **೯೩೪೬೯** |
| ೧೬. | **೩೦೯೪೮** | **೩೭೪೯೫** | **೯೪೭೫೦೯** |

೨೦. **೨೭೦೫೬೪ + ೧೭೮೦೦೬ + ೩೫೮೦೦೬ + ೮೪೬ = ?**

# ವಜಾಬಾಕಿ.

**ಮಾ. ಲೆಕ್ಕ:— ೨.** ಈ ದೇಶದಲ್ಲಿ **೧೯೨೩** ರಲ್ಲಿ **೭೭೪೨೨೨೫** ಹುಡುಗರು ಸಾಲೆಯಲ್ಲಿದ್ದರು. **೧೯೨೭** ರಲ್ಲಿ **೧೦೫೨೯೩೫೦** ಮಾತ್ರ ಇದ್ದರು. **೧೯೨೭** ರಲ್ಲಿ ಮೊದಲಿಗಿಂತ ಹೆಚ್ಚಿದ್ದ ಹುಡುಗರು ಎಷ್ಟು?

ಇಲ್ಲಿ ಸಂಖ್ಯೆಗಳ ಅಂತರ ಬೇಕಾಗಿದೆ; ಆದ್ದರಿಂದ ವಜಾಬಾಕಿ

| |
|---:|
| **೧೦೫೨೯೩೫೦** |
| **೭೭೪೨೨೨೫** |
| **೨೭೮೭೧೨೫** |
| **ಹೆಚ್ಚಾದ** ಹುಡುಗರು |

**ಲೆಕ್ಕಗಳ ಗುಂಪು:— ೫** (ಬಾಯಿಲೆಕ್ಕ)

೧. **೧೧೨** ರಲ್ಲಿ **೬** ರಂತೆ ಕಳೆಯುತ್ತ **೪೦** ರ ವರೆಗೆ ಎಣಿಸಿರಿ.

**೨.** **೨೧೮** ರಲ್ಲಿ **೮** ರಂತೆ ಕಳೆಯುತ್ತ **೯೮** ರ ವರೆಗೆ ಎಣಿಸಿರಿ.

**೩.** **೮೭** ಸಾವಿರ ಮಾವಿನ ಹಣ್ಣಿನಲ್ಲಿ **೫೯** ಸಾವಿರ ಹಣ್ಣು ಜಾತ್ರೆಯಲ್ಲಿ ಖರ್ಚಾದವು. ಉಳಿದ ಹಣ್ಣು ಎಷ್ಟು?

**೪.** **೫** ಲಕ್ಷ ರೂ. ಪಗಾರ ಹಂಚುವದಿತ್ತು; ಸಂಜೆಯ ವರೆಗೆ **೩** ಲಕ್ಷ **೮** ನೂರ ರೂಪಾಯಿ ಮಾತ್ರ ಹಂಚಿದೆವು. ಮರುದಿನ ಎಷ್ಟು ಹಂಚ ಬೇಕಾಯಿತು?

**೫.** **೪೭** ಸಾವಿರ **೫** ನೂರು ಹಂಚು ತರಿಸಿ **೩೯** ಸಾವಿರ **೩** ನೂರು ಹಂಚು ಉಪಯೋಗಿಸಿದೆವು. ಇನ್ನೆಷ್ಟು ಉಳಿದವು?

**ಲೆಕ್ಕಗಳ ಗುಂಪು:— ೬.**

**೧.** ಮಾದರಿಯ ಲೆಕ್ಕ **೧** ನೋಡು. **ಅ.** ಮುಂಬಯಿ ಇಲಾಖೆಯಲ್ಲಿ ಸೀಕರಿಗಿಂತ ಪಾರ್ಸೀಗಳು ಎಷ್ಟು ಮಂದಿ ಹೆಚ್ಚು ಇದ್ದಾರೆ? **ಬ.** ಪಾರ್ಸಿಗಳಿಗಿಂತ ಜೈನರು ಎಷ್ಟು ಜನರು ಹೆಚ್ಚು ಇದ್ದಾರೆ?

**೨.** **೧೯೨೮** ರಲ್ಲಿ ಉಗಿಬಂಡಿಯು ಒಂದು ದಾರಿಯಿಂದ **೨೧೦೦೪೮** ಜನರೂ **೧೯೨೯** ರಲ್ಲಿ **೧೭೩೩೭೧** ಜನರೂ ಹೋದರು. **೧೯೨೯** ರಲ್ಲಿ ಎಷ್ಟು ಜನರು ಕಡಿಮೆ ಹೋದರು?

೩. ಕೆಳಗೆ ಕೆಲವು ದೊಡ್ಡ ಪಟ್ಟಣಗಳ ಜನಸಂಖ್ಯೆಯನ್ನು ಕೊಟ್ಟಿದೆ.

| | | | |
|---|---|---|---|
| ಮುಂಬಯಿ | ೧೧೬೧೩೮೩ | ಅಹಮ್ಮದಾಬಾದ | ೩೧೩೭೮೯ |
| ಬೆಂಗಳೂರ | ೨೩೭೪೯೬ | ಹೈದರಾಬಾದ (ಸಿಂಧ) | ೮೧೮೩೪ |
| ಕರಾಚಿ | ೨೬೩೫೬೫ | ಸೊಲ್ಲಾಪೂರ | ೧೪೪೬೫೪ |
| ಪುಣೆ | ೨೫೦೧೮೭ | ಮೈಸೂರ | ೮೩೯೫೧ |
| ಕೊಲ್ಹಾಪುರ | ೫೫೫೯೪ | ಹುಬ್ಬಳ್ಳಿ | ೬೯೨೦೬ |

ಅ. ಅಹಮ್ಮದಾಬಾದ, ಬೆಂಗಳೂರು ಇವುಗಳ ಜನಸಂಖ್ಯೆಯು ಅಂತರವೆಷ್ಟು?

ಬ. ಕರಾಚಿ, ಪುಣೆ ಇವುಗಳಲ್ಲಿ ಯಾವದರಲ್ಲಿ ಎಷ್ಟು ಜನರು ಹೆಚ್ಚು ಇದ್ದಾರೆ?

ಕ. ಸೊಲ್ಲಾಪುರ, ಮೈಸೂರು ಇವುಗಳ ಜನಸಂಖ್ಯೆಯಲ್ಲಿ ಅಂತರವೆಷ್ಟು?

ಡ. ಹುಬ್ಬಳ್ಳಿಯಲ್ಲಿ ಹೈದರಾಬಾದಕ್ಕಿಂತ ಎಷ್ಟು ಜನರು ಕಡಿಮೆ ಇದ್ದಾರೆ?

ಇ. ಕರಾಚಿಯ ಜನಸಂಖ್ಯೆ – ಬೆಂಗಳೂರ ಜನಸಂಖ್ಯೆ = ?

ಫ. ಪುಣೆಯ ಜನಸಂಖ್ಯೆ – ಸೊಲ್ಲಾಪುರದ ಜನಸಂಖ್ಯೆ = ?

೪. ಹಿಂದುಸ್ಥಾನದಲ್ಲಿ ಜನರು ಆಡುವ ಕೆಲವು ಮಾತುಗಳನ್ನೂ ಆಯಾ ಜನರ ಸಂಖ್ಯೆಯನ್ನೂ ಕೆಳಗೆ ಕೊಟ್ಟಿದ್ದೇವೆ.

| | |
|---|---|
| ಮರಾಠಿ | ೧೮೭೯೮೦೦೦ |
| ಕನ್ನಡ | ೧೦೩೭೪೦೦೦ |
| ಗುಜರಾಥಿ | ೯೫೫೨೦೦೦ |
| ಸಿಂಧಿ | ೩೩೭೨೦೦೦ |
| ಇಂಗ್ರೇಜಿ | ೩೦೮೦೭೧ |

ಅ. ಕನ್ನಡಕ್ಕಿಂತ ಮರಾಠಿ ಮಾತಾಡುವವರು ಎಷ್ಟು ಜನರು ಹೆಚ್ಚು ಇದ್ದಾರೆ?

ಬ. ಕನ್ನಡಕ್ಕಿಂತ ಗುಜರಾಥಿ ಮಾತಾಡುವವರು ಎಷ್ಟು ಜನರು ಕಡಿಮೆ ಇದ್ದಾರೆ?

ಕ. ಸಿಂಧೀಗಿಂತ ಕನ್ನಡ ಮಾತಾಡುವವರು ಎಷ್ಟು ಜನರು ಹೆಚ್ಚು ಇದ್ದಾರೆ?

೫. ಮೂರು ಲಕ್ಷ ಮೂರು ಸಾವಿರದ ಮೂರುನೂರ ಮೂರರಲ್ಲಿ, ಎರಡು ಲಕ್ಷ ಎಂಟು ಸಾವಿರದ ಎಂಟುನೂರ ಎಂಬತ್ತು ಕಳೆ.

**೮. ಗುಂಪು:— ೭ ( ಉತ್ತರವು ಸರಿಯೆಂದು ತಾಳೆ ನೋಡಿರಿ )**

ಕೆಳಗಿನ ಸಂಖ್ಯೆಗಳ ವಜಾಬಾಕಿ ಮಾಡಿರಿ.

| | | |
|---|---|---|
| ೧. ೧೮೯೫೧೩<br>೧೪೭೮೨೫ | ೨. ೫೪೯೫೧೯<br>೩೮೭೬೨೫ | ೩. ೬೮೦೦೩೭<br>೫೯೮೯೦೦ |
| ೪. ೪೦೫೨೦೫<br>೩೧೯೪೧೭ | ೫. ೭೩೫೨೪೪<br>೫೮೭೦೩೬ | ೬. ೫೮೦೫೩೦<br>೩೯೪೯೭೭ |
| ೭. ೪೦೦೦೧೪<br>೫೦೧೧೫ | ೮. ೧೧೫೬೦೭<br>೯೧೭೫೯ | ೯. ೧೦೦೧೯೧<br>೮೯೫೦೬ |

೧೦. ಅ. ೫೪೩೭೦ – ೩೭೬೫೮ ಬ. ೩೭೬೦೪ – ೫೯೮೨೫.

೧೧. ಅ. ೭೬೦೦ – ೧೧೨೯ ಬ. ೬೮೫೦೮ – ೩೮೫೬೪.

೧೨. ರಿಂದ ೧೮. ಲೆಕ್ಕಗಳ ಗುಂಪು ೪ ರಲ್ಲಿ ೪ ರಿಂದ ೬, ೧೭ ರಿಂದ ೧೯ ಈ ಲೆಕ್ಕಗಳ ಮೇಲಿನ ಸಂಖ್ಯೆಯಲ್ಲಿ ಕೊನೆಯ ಸಂಖ್ಯೆ ಕಳೆಯಿರಿ.

೧೯. ಮೂವತ್ತೊಂಬತ್ತು ನೂರ ಇಪ್ಪತ್ತೊಂದರಲ್ಲಿ ಎಷ್ಟು ಕೂಡಿಸಿದರೆ ಹತ್ತು ಲಕ್ಷ ಆಗುವದು ?

೨೦. ಎರಡು ಸಂಖ್ಯೆಗಳ ಬೇರೀಜು ಐವತ್ತು ಸಾವಿರದ ಹದಿನೈದು ಅದೆ. ಅದರಲ್ಲಿ ಸಣ್ಣ ಸಂಖ್ಯೆ ಹತ್ತೊಂಬತ್ತು ಸಾವಿರದ ಹದಿನಾರು ಆದರೆ ದೊಡ್ಡ ಸಂಖ್ಯೆ ಯಾವದು ?

೨೧. ಎರಡು ಸಂಖ್ಯೆಗಳ ಅಂತರವು ೧೮೦೧೫ ಇದೆ. ಸಣ್ಣ ಸಂಖ್ಯೆ ೫೦೮೭ ಇದ್ದರೆ, ದೊಡ್ಡ ಸಂಖ್ಯೆ ಯಾವದು ?

೨೨. ಮೂವತ್ತು ಸಾವಿರದ ಒಂಬತ್ತು, ಈ ಸಂಖ್ಯೆಯು ಒಂಬತ್ತು ಸಾವಿರದ ಮೂವತ್ತು ಈ ಸಂಖ್ಯೆಗಿಂತ ಎಷ್ಟರಿಂದ ದೊಡ್ಡದು ?

೨೩. ೩೦೨೦೫, ೧೫೨೦೬ ಇವುಗಳ ಅಂತರದಲ್ಲಿ ೧೩೦೧೩, ೯೦೦೯ ಇವುಗಳ ಅಂತರವನ್ನು ಕಳೆಯಿರಿ.

೨೪. ಮುಂದಿನ ವಜಾಬಾಕಿಯ ಲೆಕ್ಕಗಳಲ್ಲಿ ಕಳೆಯುವ ಸಂಖ್ಯೆ ಬರೆಯಿರಿ.

| | | |
|---|---|---|
| ಅ. ೬೦೩೯೬೯೧ | ಬ. ೫೭೨೮೩೨೧ | ಕ. ೧೦೩೦೪೦೧ |
| . . . . . . . | . . . . . . . | . . . . . . . |
| ೨೬೪೨೫೦೪ | ೩೬೫೦೮೪೬ | ೯೯೬೩೯೬ |

**೨೫. ೨೯೪೦೭** ರಲ್ಲಿ ಯಾವ ಸಂಖ್ಯೆಯನ್ನು ಕೂಡಿಸಿದರೆ ೧ ಲಕ್ಷದಲ್ಲಿ **೩೨** ಸಾವಿರ ಕಳೆದಷ್ಟು ಆಗುವದು ?

**೨೬. ೯೬೮೭೩೫೨** ಹಾಗೂ **೨೩೪೨೫೭೬** ಇವುಗಳ ಬೇರೀಜಿನಲ್ಲಿ ಇವುಗಳ ಅಂತರವನ್ನು ಕಳೆಯಿರಿ.

**೨೭. ೫೧೨೦೩ – ? = ೨೭೮೬೭.** ೨೮. **೭೪೨೩೮ – ? = ೧೯೩೪೭.**

**೨೯. ೨೭೬೩೫** ರಲ್ಲಿ **೨** ಹಾಗೂ **೬** ಇವುಗಳ ಬೆಲೆಯ ಅಂತರವೆಷ್ಟು ?

**೩೦.** ಮುಂದಿನ ಸಂಖ್ಯೆಗಳಲ್ಲಿ ತೀರ ದೊಡ್ಡ ಸಂಖ್ಯೆಯಲ್ಲಿ ತೀರ ಸಣ್ಣ ಸಂಖ್ಯೆಯನ್ನು ಕಳೆಯಿರಿ. ಐದು ಸಾವಿರದ ಏಳು ನೂರು; ಐವತ್ತೇಳು ನೂರ ಏಳು; ಏಳುನೂರ ಐವತ್ತೆಂಟು; ಎಪ್ಪತ್ತೈದು ದಹಂ ಮತ್ತು ಆರು.

**ಮಾ. ಲೆಕ್ಕ:— ೩.** ಒಂದು ಹಿಂಡಿನಲ್ಲಿ ಆಕಳು, ಎಮ್ಮೆ, ಎತ್ತು ಕೂಡಿ **೬೪೮** ಅವೆ. ಅವುಗಳಲ್ಲಿ ಆಕಳು **೨೪೬,** ಎತ್ತು **೧೯೮** ಇದ್ದರೆ ಎಮ್ಮೆ ಎಷ್ಟಿವೆ ?

ಇಲ್ಲಿ ಆಕಳು ಎತ್ತುಗಳ ಸಂಖ್ಯೆ ಕೂಡಿಸಿ ಒಟ್ಟು ಸಂಖ್ಯೆಯಲ್ಲಿ ಕಳೆಯಬೇಕಾಗಿದೆ. ಆದ್ದರಿಂದ ಮೊದಲು ಬೇರೀಜು ಬಳಿಕ ವಜಾಬಾಕಿ.

**೨೪೬**ಆ.+**೧೯೮** ಎ.=**೪೪೪** ದನ; **೬೪೮**ದ.–**೪೪೪** ದ.=**೨೦೪** ಎ.

ಈ ಎರಡೂ ಕೃತಿಗಳನ್ನು ಒಮ್ಮೆಲೆ ಮಾಡುವ ರೂಢಿ ಮಾಡಿಕೊಳ್ಳಬೇಕು.

| | |
|---|---|
| ಒಟ್ಟು ದನ **೬೪೮** | **೮, ೧೪** ಮತ್ತು **ನಾಲ್ಕು ೧೮** ಕೈಲಿ **೧.** |
| ಆಕಳು **೨೪೬** | **೧, ೧೦, ೧೪** ಮತ್ತು **ಪೂಜಿ ೧೪** ಕೈಲಿ **೧.** |
| ಎತ್ತು **೧೯೮** | **೧, ೨, ೪** ಮತ್ತು **ಎರಡು ೬.** |
| ಎಮ್ಮೆ **೨೦೪** | **ಸೂಚನೆ:**–ಮೇಲಿನ **ನಾಲ್ಕು, ಪೂಜಿ, ಎರಡು** ಇವನ್ನು ಮೊದಮೊದಲು ತುಸು ಜೋರಿನಿಂದ ಅಂದು ಬರೆಯುಬೇಕು. |

**ಮಾ. ಲೆಕ್ಕ:—೪. ೮೭೬೩೧ – ೧೩೨೧ – ೧೫೩೯೭ – ೩೪೮ = ?** ಹೀಗಂದರೆ **೮೭೬೩೧** ರಲ್ಲಿ **೧೩೨೧, ೧೫೩೯೭** ಹಾಗೂ **೩೪೮** ಇವುಗಳ

ಬೇರೀಜನ್ನು ಕಳೆಯಿರಿ ಅಂದಂತಾಯಿತು. ಬೇರೀಜು ವಜಾಬಾಕಿಗಳನ್ನು ಕೆಳಗೆ ತೋರಿಸಿದಂತೆ ಒಮ್ಮೆಲೆ ಮಾಡಬಹುದು.

| | |
|---|---|
| ೮೭೬೩೧ | ೮, ೧೫ ೧೬ ಮತ್ತು ಐದು. ೨೧ ಕೈಲಿ ೨. |
| ೧೩೨೧ | ೨, ೬, ೧೫, ೧೭ ಮತ್ತು ಆರು. ೨೩ ಕೈಲಿ ೨. |
| ೧೫೩೯೭ | ೨, ೫, ೮, ೧೧ ಮತ್ತು ಐದು. ೧೬ ಕೈಲಿ ೧. |
| ೩೪೮ | ೧, ೬, ೭, ಮತ್ತು ಪೂಜಿ. ೭, |
| ೭೦೫೬೫ | ೧ ಮತ್ತು ಏಳು. ೮ |

ಈ ಮೂರೂ ಸಂಖ್ಯೆಗಳನ್ನು ಒಂದೊಂದಾಗಿ ಕಳೆದು ತಾಳೇ ನೋಡಿರಿ.

## ಲೆಕ್ಕಗಳ ಗುಂಪು.— ೮. (ಬಾಯಿಲೆಕ್ಕ).

೧. ನನ್ನ ಹತ್ತರ ೧೫ ರೂ. ಅವೆ. ಒಂದು ಕೈಯಲ್ಲಿ ೫ ರೂ. ಮತ್ತೊಂದರಲ್ಲಿ ೭ ರೂ. ಇದ್ದರೆ ಕಿಸೆಯಲ್ಲಿರುವ ರೂ. ಎಷ್ಟು ?

೨. ಮೂವರು ಕುರುಬರಿಂದ ೪೫ ಕಂಬಳಿ ಕೊಂಡೆವು. ಒಬ್ಬನು ೧೮ ೨ನೆಯವನು ೧೫ ಕೊಟ್ಟನು. ೩ನೆಯವನಿಂದ ಎಷ್ಟು ಕೊಂಡೆವು ?

೩. ಒಂದು ಹಳ್ಳಿಯ ಕೊಂಡವಾಡೆಯಲ್ಲಿ ೨೫ ಪ್ರಾಣಿ ಇವೆ. ಅವುಗಳಲ್ಲಿ ೮ ಕತ್ತೆ, ೭ ಆಕಳು ಇದ್ದರೆ ಉಳಿದ ಪ್ರಾಣಿ ಎಷ್ಟು ಇರುವವು ?

೪. ಒಬ್ಬ ಒಕ್ಕಲಿಗನು ಹೊಲದಲ್ಲಿ ೨೫ ಸೇರು ಕಾಳು ಬಿತ್ತಿದ್ದಾನೆ. ಅದರಲ್ಲಿ ೫ ಸೇ. ಹೆಸರು ೪ ಸೇ. ತೊಗರಿ ಹಾಕಿದ್ದಾರೆ. ಅವನು ಬಿತ್ತಿದ ಜೋಳವೆಷ್ಟು ?

೫. ಒಂದು ಸಾಲೆಯಲ್ಲಿ ೩೨ ಹುಡುಗರಿದ್ದಾರೆ; ಅವರಲ್ಲಿ ಬ್ರಾಹ್ಮಣರು ೫, ಲಿಂಗವಂತರು ೧೮, ಆದರೆ ಮಿಕ್ಕ ಜಾತಿಗಳ ಹುಡುಗರು ಎಷ್ಟು ?

## ಲೆಕ್ಕಗಳ ಗುಂಪು:—೯.

೧. ಒಬ್ಬ ಕುರುಬನಲ್ಲಿ ೧೮೩೬ ಕುರಿ ಇದ್ದವು. ೩೯ ಕುರಿ ಸತ್ತವು. ೮೩೯ ಕುರಿ ಮಾರಿದನು. ಅವನಲ್ಲಿ ಉಳಿದ ಕುರಿಗಳೆಷ್ಟು ?

೨. ಒಂದು ತೋಟದಲ್ಲಿ ೨೬೧೪ ಗಿಡ ಅವೆ. ಅವುಗಳಲ್ಲಿ ೩೫೮ ಮಾವಿನವು, ೫೨೬ ಪೇರಲದವು, ೨[illegible] ಲಿಂಬೆಯವು, ಉಳಿದ ಕಿತ್ತಳಿಯವು ಎಷ್ಟು?

೩. ಗೌಡರು ೨೬೦೦೦ ರೂ. ಕೊಟ್ಟು ಒಂದು ತೋಟ ಕೊಳ್ಳಬೇಕಾಗಿತ್ತು. ಅವರ ಹತ್ತಿರ ೧೭೫೬೦ ರೂ. ಇದ್ದವು; ೫೫೦೦ ರೂ. ಬ್ಯಾಂಕಿನಲ್ಲಿ ಅವರು ಸಾಲ ತೆಗೆದರು. ಹಾಗು ೧೩೦೦ ರೂ. ಕೈಗಡ ತಂದರು. ಇನ್ನೂ ಅವರಿಗೆ ಎಷ್ಟು ರೂ. ಕಡಿಮೆ ಬಿದ್ದವು ?

೪. ಒಂದು ತಾಲೂಕಿನಲ್ಲಿ ೧೫೫೮೦ ಮತದಾರರಿದ್ದಾರೆ. ಇವರಲ್ಲಿ ೭೩೦೮ ಮತಗಳು ಒಬ್ಬ ಉಮೇದವಾರನಿಗೆ ೨೫೮೭ ಮತ್ತೊಬ್ಬನಿಗೆ ಬಿದ್ದವು. ಆದರೆ ಮತಕೊಡಲಿಕ್ಕೆ ಬಾರದಿದ್ದವರು ಎಷ್ಟು ಜನರು ?

೫. ಒಬ್ಬನು ತನ್ನಲ್ಲಿದ್ದ ೫೫೦೩ ರೂ. ಗಳನ್ನು ಪಾಲು ಮಾಡಿಕೊಡುವಾಗ ಹಿರೇಮಗನಿಗೆ ೧೨೧೯ ರೂ. ಕಿರಿಯವನಿಗೆ ಇದಕ್ಕೂ ೬೦೮ ರೂ. ಹೆಚ್ಚು ಕೊಟ್ಟರೆ, ನಡುವಿನ ಮಗನ ಪಾಲಿಗೆ ಎಷ್ಟು ರೂ. ಬಂದವು ?

೬. ಒಂದು ಸಾಲೆಯಲ್ಲಿ ೩೪೫ ಹುಡುಗರಿದ್ದಾರೆ. ಮೊದಲಿನ ೪ ಇ॥ ಗಳಲ್ಲಿ ೨೪೮, ೬ನೆಯ ಇ॥ ಯಲ್ಲಿ ೨೬, ೭ನೆಯದರಲ್ಲಿ ೩೮ ಹುಡುಗರಿದ್ದರೆ, ೫ನೆಯ ಇ॥ ಯಲ್ಲಿರುವ ಹುಡುಗರು ಎಷ್ಟು ?

೭. ಮುಂಬಯಿ, ಮದ್ರಾಸ, ಬಂಗಾಲ ಇಲಾಖೆಗಳಲ್ಲಿ ಕೂಡಿ ೩೫೨೮೫೪೫೮ ಮುಸಲ್ಮಾನರಿದ್ದರು. ಇವರಲ್ಲಿ ಮುಂ. ಇಲಾಖೆಯಲ್ಲಿ ೪೪೫೬೮೯೭ ಮದ್ರಾಸದಲ್ಲಿ ೩೩೩೦೯೩೭ ಜನರು ಇದ್ದರೆ, ಬಂಗಾಲದಲ್ಲಿದ್ದವರ ಸಂಖ್ಯೆ ಎಷ್ಟು ?

ಮುಂದಿನ ಲೆಕ್ಕಗಳಲ್ಲಿ ಮೇಲಿನ ಸಂಖ್ಯೆಯಲ್ಲಿ ಗೆರೆಗಳ ನಡುವಿರುವ ಸಂಖ್ಯೆಗಳ ಬೇರೀಜು ಕಳೆಯಿರಿ.

| | | | |
|---|---|---|---|
| ೮. ೧೪೭೫ | ೯. ೫೨೭೫ | ೧೦. ೭೦೨೮ | ೧೧. ೯೨೦೬ |
| ೨೪ | ೩೪ | ೧೭೪೨ | ೪೩೭೪ |
| ೩೪೬ | ೪೩೫ | ೧೨೫೬ | ೧೨೯೭ |
| ೯೬ | ೧೩೬ | ೨೬ | ೫೯ |
| ೧೫೯ | ೬೮ | ೩೪೮ | ೮೩೬ |

| ೧೨. ೩೫೯೮೪೬ | ೧೩. ೬೪೯೫೪೩ | ೧೪. ೭೦೦೫೦೩ |
|---|---|---|
| ೯೮೨೬೭ | ೧೨೦೯೨೪ | ೧೪೫೮೨೭ |
| ೩೪೬೭೮ | ೩೮೫೩೯ | ೧೩೭೬೦೯ |
| ೨೫೧೦೩ | ೨೯೦೮೪ | ೫೭೮೪೮ |
| ೨೩೯ | ೯೫ | ೫೬೪ |

೧೫. ೧೨೪೫, ೩೪೨೧, ೫೮೩೪ ಇವುಗಳ ಬೇರೀಜನ್ನು ೭೪೮೩೨ ರಲ್ಲಿ ಕಳೆಯಿರಿ.

೧೬. ೧೮೦೬, ೫೪೧೭, ೬೨೩೪ ಇವುಗಳ ಬೇರೀಜಿನಲ್ಲಿ ಎಷ್ಟು ಕೂಡಿದರೆ ೧೫೯೪೮ ಬರುವದು ?

ಕೆಳಗಿನ ಬೇರೀಜಿನ ಲೆಕ್ಕಗಳಲ್ಲಿ ಚಿಹ್ನ ಹಾಕಿದಲ್ಲಿ ಅಂಕೆಗಳನ್ನು ತುಂಬಿರಿ.

| ೧೭. | ೧೮. | ೧೯. |
|---|---|---|
| ೧೫೪೧೨೫೮ | ೨೮೩೪೪೦೫ | ೪೫೩೬೨೧೧ |
| ೨೩೦೯೬೫೮ | ೩೭೦೦೫೯೫ | , , , , , , |
| ೩೮೭೬೯೪೮ | , , , , , , , | ೮೩೯೦೫೩೧ |
| , , , , , , , | ೫೯೦೮೦೩೪ | ೩೦೮೬೭೪೫ |
| ೮೮೦೩೫೯೧ | ೧೭೦೮೨೦೪೩ | ೧೮೦೯೯೧೬೫ |

ಕೆಳಗಿನ ಲೆಕ್ಕಗಳ ಉತ್ತರವನ್ನು ಒಮ್ಮೆಲೆ ಬರೆಯಿರಿ.

೨೦. ೮೭೩೧೮ – ೧೪೩೧೯ – ೫೭೨೮ – ೩೪೮

೨೧. ೬೪೦೬೯ – ೩೯೨೮ – ೬೯೪೬ – ೧೦೪೦೫

೨೨. ರಿಂದ ೨೭. ಲೆಕ್ಕಗಳ ಗುಂಪು ೪ ರಲ್ಲಿ ೪ ರಿಂದ ೬, ೧೭ರಿಂದ ೧೯ ಈ ಲೆಕ್ಕಗಳಲ್ಲಿ ಮೇಲಿನ ಸಂಖ್ಯೆಯಲ್ಲಿ ಮಿಕ್ಕ ಸಂಖ್ಯೆಗಳ ಬೇರೀಜು ಕಳೆಯಿರಿ.

೨೮. ಒಂದು ಅಂಗಡಿಯಲ್ಲಿ ತಿಂಗಳ ಕೊನೆಗೆ ೮೩೨ ರೂಪಾಯಿಯ ಸಾಮಾನು ಇತ್ತು. ಮರುತಿಂಗಳಲ್ಲಿ ೫೪೮ ರೂ. ಯ ಸಾಮಾನು

ಬಂತು, ೯೫೭ ರೂ. ಯ ಸಾಮಾನು ಮಾರಿತು. ಆ ತಿಂಗಳ ಕೊನೆಗೆ ಅಲ್ಲಿ ಎಷ್ಟು ರೂ. ಯ ಸಾಮಾನು ಸಿಲಕು ಇತ್ತು ?

೨೯. ಗಂಗಪ್ಪನಲ್ಲಿ ೮೪೫ ಕುರಿ ಇದ್ದವು; ಭೀಮಪ್ಪನಲ್ಲಿ ೬೭೨ ಇದ್ದವು. ಗಂಗಪ್ಪನ ೧೨೩ ಕುರಿಗಳನ್ನು ಭೀಮಪ್ಪನು ಕೊಂಡರೆ ಪ್ರತಿಯೊಬ್ಬನಲ್ಲಿ ಎಷ್ಟು ಕುರಿ ಆಗುವವು ?

೩೦. ಒಂದು ಊರಲ್ಲಿ ೯೫೦೮ ಜನರು ಇದ್ದಾರೆ. ಮತ್ತೊಂದರಲ್ಲಿ ಇದಕ್ಕಿಂತ ೬೭೯ ಜನರು ಕಡಿಮೆ ಇದ್ದಾರೆ. ಎರಡೂ ಊರುಗಳ ಒಟ್ಟು ಜನಸಂಖ್ಯೆ ಎಷ್ಟು ?

೩೧. ಒಬ್ಬ ತೋಟಿಗನು ಒಂದು ಬುಟ್ಟಿಯಲ್ಲಿ ೨೫೦ ಮತ್ತೊಂದರಲ್ಲಿ ೧೮೦ ನಿಂಬೆಯ ಹಣ್ಣು ಹಾಕಿಟ್ಟಿದ್ದನು. ಗಿರಾಕಿಗೆ ಕೊಡುವಾಗ ಎರಡರಲ್ಲೂ ಹಣ್ಣು ಸರಿ ಆಗಬೇಕೆಂದು ೧ನೆಯ ಬುಟ್ಟಿಯೊಳಗಿನ ೨೫ ಹಣ್ಣು ತೆಗೆದು ೨ನೆಯ ಬುಟ್ಟಿಯಲ್ಲಿ ಹಾಕಿದನು, ಆದರೂ ಒಂದನೆಯ ಬುಟ್ಟಿಯಲ್ಲಿ ಎಷ್ಟು ಹಣ್ಣು ಹೆಚ್ಚಾದವು ?

೩೨. ಯುಗಾದಿಯ ದಿನ ಒಂದು ಹಳ್ಳಿಯಲ್ಲಿ ೧೪೧೫ ಜನರಿದ್ದರು. ಆ ವರುಷ ೩೭ ಹುಡುಗರು ಹುಟ್ಟಿದರು; ೨೫ ಜನರು ಸತ್ತರು; ೧೪೮ ಜನರು ಊರಬಿಟ್ಟರು. ಮರುವರುಷ ಯುಗಾದಿಯ ಮುಂದೆ ಆ ಊರ ಜನಸಂಖ್ಯೆ ಎಷ್ಟಿತ್ತು ?

---

# ಗುಣಾಕಾರ

**ಉಜಳಣಿ.**

**ಲೆಕ್ಕಗಳ ಗುಂಪು:—೧೦. ( ಬಾಯಿಲೆಕ್ಕ )**

೧. ೨೫, ೩೮, ೪೬, ೫೯, ೬೭ ಇವಕ್ಕೆ ೧೦ ರಿಂದ ಗುಣಿಸಿರಿ.

೨. ೧೦ ರೂಪಾಯಿಗಳ ೪೪ ನೋಟು ಇವೆ, ಬಿಡಿ ರೂ. ಎಷ್ಟು ಬರುವವು?

೩. ಒಂದು ಆಡಿಗೆ ೧೨ ರೂ. ಆದರೆ ೨೨ ಆಡಿನ ಬೆಲೆ ಏನು ?

೪. ಒಂದು ಮೇಜಿಗೆ ೧೬ ರೂ. ಆದರೆ ೩೫ ಮೇಜಿನ ಬೆಲೆ ಏನು ?

೫. ೫೨ರೂ.×೧೦=? ೬. ೧೦೦ ಕೋಳಿ×೧೦=? ೭. ೬೮ಕುರಿ×೨೦=?

೮. ೧೨೫ × ೧೦ = ? ೯. ೧೨೫ × ೩೦ = ? ೧೦. ೨೩೫ × ೧೦ = ?
೧೧. ೭೮ × ೧೨ = ? ೧೨. ೮೩ ಕೀಲಿ × ೧೫ = ? ೧೩. ೯೫ × ೧೬ = ?
೧೪. ೫೦ × ೨೪ = ? ೧೫. ೬೦ × ೩೫ = ? ೧೬. ೭೦ × ೪೩ = ?

೧ ಹಣ್ಣು ೧೦೦ ಸಾರೆ ಅಂದರೆ ೧೦೦ ಹಣ್ಣು ಅಂದರೆ ೧ ಶತಂ ಹಣ್ಣು
೧ ರೂ. ೧೦೦ ಸಾರೆ ಅಂದರೆ ೧೦೦ ರೂ. ಅಂದರೆ ೧ ಶತಂ ರೂ.
೨ ರೂ. ೧೦೦ ಸಾರೆ ಅಂದರೆ ೨೦೦ ರೂ. ಅಂದರೆ ೨ ಶತಂ ರೂ.
೩ ರೂ. ೧೦೦ ಸಾರೆ ಅಂದರೆ ೩೦೦ ರೂ. ಅಂದರೆ ೩ ಶತಂ ರೂ.

ಆದ್ದರಿಂದ ಯಾವದೇ ಸಂಖ್ಯೆಯನ್ನು ೧೦೦ ಸಾರೆ ತೆಗೆದುಕೊಂಡರೆ, ಅಥವಾ ಆ ಸಂಖ್ಯೆಯ ೧೦೦ ಪಟ್ಟು ಮಾಡಿದರೆ, ಅಥವಾ ಆ ಸಂಖ್ಯೆಗೆ ೧೦೦ ರಿಂದ ಗುಣಿಸಿದರೆ ಆ ಸಂಖ್ಯೆಯಷ್ಟು ಶತಮುಗಳು ಬರುವವು. ಆದ್ದರಿಂದ ಉತ್ತರ ಬರೆಯುವಾಗ ಆ ಸಂಖ್ಯೆ ಬರೆದು ಮುಂದೆ ಎರಡು ಪೂಜಿ ಇಡಬೇಕು.

ಒಂದು ಬುಟ್ಟಿಯಲ್ಲಿ ೩೫ ಹಣ್ಣಿನಂತೆ ೧೦೦ ಬುಟ್ಟಿಗಳಲ್ಲಿ ಹಾಕಿದರೆ ೩೫×೧೦೦=೩೫೦೦ ಒಟ್ಟು ಹಣ್ಣು ಆಗುವವು.

## ಲೆಕ್ಕಗಳ ಗುಂಪು:—೧೧. ( ಬಾಯಿಲೆಕ್ಕ )

೧. ಒಂದು ಮೇಜಿಗೆ ೬ ರೂ. ಅಂದರೆ ೧೦೦ ಮೇಜುಗಳ ಬೆಲೆ ಏನು ?
೨. ಒಂದು ಕುರಿಗೆ ೧೫ ರೂ. ಅಂದರೆ ೧೦೦ ಕುರಿಗಳ ಬೆಲೆ ಏನು ?
೩. ಒಂದು ರುಮಾಲಿಗೆ ೨೫ ರೂ. ೧೦೦ ರುಮಾಲುಗಳಿಗೆ ?
೪. ಒಬ್ಬನಿಗೆ ಪುಣೆಗೆ ಹೋಗಲಿಕ್ಕೆ ೫ ರೂ. ಹಾಸಲು; ೨೦೦ ಜನರಿಗೆಷ್ಟು?
೫. ಒಂದು ಸೀರೆಗೆ ೧೭ ರೂ. ೩೦೦ ಸೀರೆಗಳಿಗೆ ಎಷ್ಟು ?
೬. ಒಂದು ಸರದಲ್ಲಿ ೭೦೦ ಮುತ್ತು ಇವೆ. ಇಂಥ ೧೬ ಸರಗಳಲ್ಲಿರುವ ಒಟ್ಟು ಮುತ್ತು ಎಷ್ಟು ?
೭. ಒಂದು ಪೆಟ್ಟಿಗೆಯಲ್ಲಿ ೮೦೦ ಕಪ್ಪುರದ ಪುಡಿಕೆ ಇವೆ. ಒಂದೊಂದು ಪುಡಿಕೆಯಲ್ಲಿ ೧೨ ವಡಿ ಇದ್ದರೆ ಒಟ್ಟು ಎಷ್ಟು ವಡಿ ಆಗುವವು ?
೮. ಛಾಪಿಸುವ ಕಾಗದದ ಒಂದು ಗಡ್ಡಿಯಲ್ಲಿ ೫೦೦ ಹಾಳಿ ಇರುವವು, ೧೮ ಗಡ್ಡಿಗಳಲ್ಲಿಯ ಒಟ್ಟು ಹಾಳಿ ಎಷ್ಟು ?

**ಮಾ. ಲೆಕ್ಕ:— ೫.** ಒಂದು ಕುದುರೆಗೆ **೧೨೫** ರೂ. **೨೦೦** ಕುದುರೆಗೆಷ್ಟು?

ಇಲ್ಲಿ **೧೨೫** ರೂ. **೨೦೦** ಸಾರೆ ಕೊಡಬೇಕಾಗಿದೆ; ಆದ್ದರಿಂದ ಗುಣಾಕಾರ.

| ದ. | ಸ. | ಸ. | ಶ. | ದ. | ಎ. |
|---|---|---|---|---|---|
| | | | ೧ | ೨ | ೫ |
| | | | ೨ | ೦ | ೦ |
| | ೨ | ೫ | ೦ | | |
| | | ೦ | ೦ | ೦ | |
| | | | ೦ | ೦ | ೦ |
| | ೨ | ೫ | ೦ | ೦ | ೦ |

ಶತಂ ಸ್ಥಾನದ ಅಂಕೆಯಿಂದ ಗುಣಾಕಾರ.
೨×೫=೧೦ (ಶ) **ಪೂಜಿ** (ಶತಂ) **ಕೈಲಿ** ೧ (ಸ)
೨×೨= ೪ (ಸ.) **ಐದು** (ಸ.)
೨×೧= **ಎರಡು** (ದ. ಸ.)
ದಹಮು ಎಕ್ಕಮು ಸ್ಥಾನಗಳಲ್ಲಿ ಪೂಜಿಗಳಿವೆ. ಅವುಗಳಿಂದ ಗುಣಿಸಿದರೆ ಗುಣಾಕಾರದಲ್ಲಿ ಪೂಜಿ ಬರುವವು. ಅವುಗಳನ್ನು ಬಿಟ್ಟರೂ ಅಡ್ಡಿಯಿಲ್ಲ. ಇಲ್ಲಿ ಇಟ್ಟು ತೋರಿಸಿದೆ.

**೨೦೦,೩೦೦……೯೦೦** ಇವುಗಳಿಂದ ಗುಣಿಸುವಾಗ **೨,೩…೯** ರಿಂದ ಗುಣಿಸಿ ದಹಂ ಎಕ್ಕಂ ಸ್ಥಾನಗಳಲ್ಲಿ ಪೂಜಿ ಇಡಬೇಕು.

## ಲೆಕ್ಕಗಳ ಗುಂಪು:—೧೨.

೧. ಒಂದು ಬದನೆಯ ತೋಟದಲ್ಲಿ ನೂರು ಅಗಿಗಳ **೧೩೫** ಸಾಲು ಅವೆ. ಒಟ್ಟು ಎಷ್ಟು ಅಗಿಗಳನ್ನು ಹಚ್ಚಿರುವರು ?

೨. ಒಂದೊಂದು ಪುಡಿಕೆಯಲ್ಲಿ **೨೦೦**ರಂತೆ **೨೪೮** ಪುಡಿಕೆಗಳಲ್ಲಿರುವ ಒಟ್ಟು ಟಾಚಣಿಗಳೆಷ್ಟು ?

೩. ಒಂದು ತಾಲೂಕಿನಲ್ಲಿ ಸರಕಾರದವರು ಒಬ್ಬೊಬ್ಬ ರೈತನಿಗೆ **೫೦೦** ರೂ.ಯಂತೆ **೪೩೮** ಜನ ರೈತರಿಗೆ ಒಡ್ಡುಹಾಕಲಿಕ್ಕೆ ತಗಾಯಿ ಕೊಟ್ಟರು. ಒಟ್ಟು ತಗಾಯಿ ಹಣವು ಎಷ್ಟಾಯಿತು ?

೪. ಒಂದು ಬಾಟಲಿಯಲ್ಲಿ **೪೦೦** ಗುಳಿಗೆ ಇವೆ. ನಾವು ಇಂಥ **೨೩೫** ಬಾಟಲಿ ಕೊಂಡರೆ ಒಟ್ಟು ಎಷ್ಟು ಗುಳಿಗೆಗಳು ಬರುವವು ?

೫. ಒಂದು ದಾರದ ಉಂಡಿಯಲ್ಲಿ **೬೦೦** ಫೂಟು ಉದ್ದ ದಾರವಿದೆ. **೨೫೪** ಉಂಡಿಗಳಲ್ಲಿ ಕೂಡಿ ಎಷ್ಟು ಉದ್ದ ದಾರವಿರುವದು ?

೬. **೧೮೭×೧೦೦** = ? ೭. **೩೫೫×೨೦೦** = ? ೮. **೪೨೮×೩೦೦** = ?

೯. ೫೩೯×೪೦೦=? ೧೦. ೬೪೨×೫೦೦=? ೧೧. ೭೦೫×೬೦೦=?

೧೨. ೧೦೨೫×೭೦೦=? ೧೩. ೨೪೩೮×೮೦೦=? ೧೪. ೩೫೪೬×೯೦೦=?

೧೫. ೫೦೦೦×೬೦೦=? ೧೬. ೧೦೦೦×೧೦೦೦=? ೧೭. ೩೦೦೦×೩೦೦೦=?

೧೮. ಒಂದೊಂದರಲ್ಲಿ ೧೦೦ ಪೇಪರಮೆಂಟು ಇರುವ ೫೦ ಪುಡಿಕೆ ತಂದರೆ ೫೦೦ ಪೇ. ಮೆಂಟು ಇರುವ ೧೦ ಪುಡಿಕೆ ಆಗುವವೆಂದು ತೋರಿಸಿರಿ.

**ಮಾ.ಲೆಕ್ಕ:—೬.** ಒಂದು ಹಳ್ಳಿಯು ಸುತ್ತಲು ೪೨೮ ಎಕರೆ ಹೊಲ ಇದೆ. ಎಕರೆಗೆ ೩೬೯ ರೂ. ಯಂತೆ ಇವೆಲ್ಲ ಹೊಲಗಳ ಒಟ್ಟು ಬೆಲೆ ಎಷ್ಟು?

ಇಲ್ಲಿ ಕೇಳಿದ ಬೆಲೆಯು ಕೊಟ್ಟ ಬೆಲೆಯ ೪೨೮ ಪಟ್ಟು ಇವೆ. ಆದ್ದರಿಂದ ಗುಣಾಕಾರ ೩೬೯ ರೂ. ೪೨೮ ಸಾರೆ ಅಂದರೆ ೪೦೦+೨೦+೮ ಸಾರೆ.

| ಅ. | ಬ. | ಕ. |
|---|---|---|
| ೩೬೯ | ೩೬೯ | ೩೬೯ |
| ೪೨೮ | ೪೨೮ | ೪೨೮ |
| ೧೪೭೬೦೦=೩೬೯×೪೦೦ | ೭೩೮೦ | ೨೯೫೨ |
| ೭೩೮೦=೩೬೯×೨೦ | ೧೪೭೬೦೦ | ೭೩೮೦ |
| ೨೯೫೨=೩೬೯×೮ | ೨೯೫೨ | ೧೪೭೬೦೦ |
| ೧೫೭೯೩೨=೩೬೯×೪೨೮ | ೧೫೭೯೩೨ | ೧೫೭೯೩೨ |

**ಸೂಚನೆ.** ಬೇಕಾದ ಅಂಕೆಯಿಂದ ಗುಣಾಕಾರವನ್ನು ಆರಂಭಿಸಬಹುದು ಎಡದಿಂದ ಬಲಕ್ಕೆ ಗುಣಾಕಾರ ಮಾಡುವದು ಮೇಲಾದದ್ದು.

## ಲೆಕ್ಕಗಳ ಗುಂಪು:—೧೩.

೧. ಒಂಮು ಚೀಲ ಗೋದಿಯು ೧೬೮ ಪೌ. ತೂಗಿದರೆ ೩೯೫ ಚೀಲಗಳ ತೂಕವೆಷ್ಟು?

೨. ಒಂದು ಪುಸ್ತಕದಲ್ಲಿ ೩೨೮ ಪಾನು ಇವೆ. ಇಂಥ ೮೩೪ ಪುಸ್ತಕಗಳಲ್ಲಿರುವ ಒಟ್ಟು ಪಾನುಗಳು ಎಷ್ಟು?

೩. ಒಂದು ಬುಟ್ಟಿಯಲ್ಲಿ ೧೩೮ ತತ್ತಿಯಂತೆ ಹಾಕಿ ೪೫೭ ಬುಟ್ಟಿಗಳನ್ನು ಕಳಿಸಬೇಕಾಗಿದೆ. ನಮಗೆ ಒಟ್ಟು ತತ್ತಿ ಎಷ್ಟು ಬೇಕು?

೪. ಒಂದು ರೂ. ಗೆ **೧೯೨** ಸೂಜಿ ಕೊಡುವರು. **೮೩೬** ರೂ. ಗಳಿಗೆ?

೫. ಒಂದು ಹಳ್ಳಿಯ ಸಾಲೆಯ ಬಗ್ಗೆ ಲೋ. ಬೋರ್ಡಕ್ಕೆ **೪೧೮** ರೂ. ಖರ್ಚು ಬರುವದು. ಒಂದು ಜಿಲ್ಹೆಯಲ್ಲಿ ಇಂಥ **೩೨೭** ಸಾಲೆ ಇವೆ. ಇವುಗಳ ಬಗ್ಗೆ ಒಟ್ಟು ಖರ್ಚು ಎಷ್ಟು ಆಗುವದು ?

೬. ತಾವರಗಟ್ಟೆಯಿಂದ **೬೭೫** ಗಾಡಿ ಬಿದಿರು ಬಂದವು; ಒಂದೊಂದು ಗಾಡಿಯಲ್ಲಿ **೬೪೮** ಬಿದಿರು ಇದ್ದರೆ ಒಟ್ಟು ಬಂದ ಬಿದಿರು ಎಷ್ಟು ?

೭. ಒಬ್ಬನು ಒಂದು ಕಾರ್ಡಿನ ಮೇಲೆ **೧೪೮** ಶಬ್ದಗಳಂತೆ **೨೩೯** ಕಾರ್ಡು ಬರೆದರೆ ಎಷ್ಟು ಶಬ್ದಗಳಾಗುವವು ?

೮. ಒಂದು ಯಂತ್ರವು ಮಿನಿಟಗೆ **೯೫೭** ಬಿಳೆ ಬೀಡಿಗಳನ್ನು ಕಟ್ಟುವದು! ದಿನಾಲು ಅದು **೩೨೪** ಮಿನಿಟು ನಡೆದರೆ ಎಷ್ಟು ಬೀಡಿ ಆಗುವವು ?

೯. ಒಂದು ಡೇರೆಗೆ **೪೦೮** ರೂ. ಇಂಥ **೨೩೫** ಡೇರೆಗಳ ಬೆಲೆ ಏನು ?

೧೦. ಒಂದು ತೋಟದಲ್ಲಿದ್ದ **೫೩೬** ಮಾವಿನ ಗಿಡಗಳಲ್ಲಿ **೩೬೫** ಕ್ಕೆ ಕಾಯಿ ಆದವು. ಪ್ರತಿಯೊಂದರಿಂದ **೬೩೫** ಕಾಯಿ ಇಳಿಸಿ ತಂದರೆ ಒಟು ಎಷ್ಟು ಕಾಯಿ ಆದವು ?

೧೧. ಒಬ್ಬ ಎಲೆ ಮಾರುವವನು ಮುಂಬಯಿಗೆ **೩೬೮** ಬುಟ್ಟಿ ಎಲೆ ಕಳಿಸಿದನು. ಒಂದೊಂದು ಬುಟ್ಟಿಯಲ್ಲಿ **೮೫೭** ಕಟ್ಟು ಎಲೆ ಹಾಕಿದ್ದರೆ, ಅವನು ಕಳಿಸಿದ ಒಟ್ಟು ಎಲೆಕಟ್ಟು ಎಷ್ಟು ?

೧೨. ಒಂದು ಸರದಲ್ಲಿ **೪೦೫** ಕರಿಮಣಿಯಂತೆ **೩** ಗ್ರೋಸು ಸರಗಳಲ್ಲಿ ಎಷ್ಟು ಮಣಿ ಇರುವವು ? ( ೧ಗ್ರೋಸು=೧೪೪.)

| | ಅ. | ಬ. | ಕ. | ಡ. | ಇ. | ಫ. |
|---|---|---|---|---|---|---|
| ೧೩. | ೬೭೧೪×೧೦೫, | ೧೪೭, | ೩೬೯, | ೪೫೮, | ೭೨೫, | ೮೬೪ |
| ೧೪. | ೪೩೦೨೫×೩೧೨, | ೪೯೩, | ೬೭೮, | ೮೫೭, | ೯೬೫, | ೬೫೦ |
| ೧೫. | ೫೪೮೦೬×೪೦೮, | ೫೩೯, | ೭೧೬, | ೬೯೩, | ೯೭೦, | ೮೦೮ |

| | ಅ. | ಬ. | ಕ. | ಡ. |
|---|---|---|---|---|
| ೧೬. | ೪೦೫೭×೨೩೦೯, | ೩೫೧೬, | ೮೦೯೪, | ೭೪೬೫ |

---

# ಭಾಗಾಕಾರ

( ೫೭೪೫ )

**ಲೆಕ್ಕಗಳ ಗುಂಪು:—೧೪.** ( ಬಾಯಿಲೆಕ್ಕ )

೧. **೫೬, ೨೩೮** ಇವಕ್ಕೆ **೧೦** ರಿಂದ ಭಾಗಿಸಿದರೆ ಭಾಗಾಕಾರ ಎಷ್ಟು ಬರುವದು ?

೨. **೧೩೭, ೪೨೯, ೬೦೮** ಇವಕ್ಕೆ **೧೦** ರಿಂದ ಭಾಗಿಸಿದರೆ ಬಾಕಿ ಎಷ್ಟು?

೩. **೧**ನೆಯ ಲೆಕ್ಕದಲ್ಲಿಯ ಭಾಗಾಕಾರದ ಬಾಕಿಗಳು ಎಷ್ಟು ?

೪. **೧೦** ರಿಂದ ಭಾಗಿಸಿದರೆ ಎಕ್ಕಂ ಸ್ಥಾನದ ಅಂಕೆಯು ಯಾಕೆ ಉಳಿಯುವದು ?

೫. **೧೦** ರಿಂದ ಭಾಗಿಸಿದಾಗ ಬಾಕಿ ಉಳಿಯುವ **೪** ಸಂಖ್ಯೆ ಹಾಗು ಬಾಕಿ ಏನೂ ಉಳಿಯದ ನಾಲ್ಕು ಸಂಖ್ಯೆ ಹೇಳಿರಿ.

**೧೦೦** ರಿಂದ ಭಾಗಿಸುವದೆಂದರೆ **೧೦೦** ರ ಗಂಟು ಕಟ್ಟುವದು ಅಥವಾ **೧೦೦** ಭಾಗ ಮಾಡುವದು.

**ಲೆಕ್ಕಗಳ ಗುಂಪು:— ೧೫.** ( ಬಾಯಿಲೆಕ್ಕ )

೧. **೫೦೦** ರೂ. **೭೦೦** ರೂ. **೯೦೦** ರೂ. ಇವುಗಳನ್ನು ಕೊಟ್ಟು ನೂರು ರೂಪಾಯಿಯ ನೋಟು ತಂದರೆ ಎಷ್ಟು ನೋಟುಗಳು ಬರುವವು ?

೨. **೨೩೬** ರೂ. **೩೪೮** ರೂ. **೫೯೦** ರೂ. **೬೦೭** ರೂ. ಇವುಗಳಲ್ಲಿ **೧೦೦** ರೂ. ಯ ಗಂಟುಗಳು ಎಷ್ಟು ಆಗುವವು. ಎಷ್ಟು ರೂ. ಉಳಿಯುವವು?

೩. **೨೯೫** ರೂ. **೪೦೯** ರೂ. **೫೩೮** ರೂ. ಇವನ್ನು **೧೦೦** ಜನರಲ್ಲಿ ಹಂಚಿರಿ. ಪ್ರತಿಯೊಬ್ಬನಿಗೆ ಎಷ್ಟು ರೂ. ಬರುವವು ? ಎಷ್ಟು ರೂ. ಉಳಿಯುವವು ?

೪. **೧೪೦೮. ೨೩೨೪, ೩೩೫೨** ಮುತ್ತು ಇರುವ ಮೂರು ಗಂಟು ಇವೆ. ಒಂದೊಂದು ಗಂಟಿನಲ್ಲಿಯ ಮುತ್ತುಗಳಲ್ಲಿ ನೂರರ ಸರ ಮಾಡಿದರೆ ಎಷ್ಟು ಸರ ಆಗುವವು ? ಎಷ್ಟು ಮುತ್ತು ಉಳಿಯುವವು ?

೫. **೫೦೭೪** ರೂ. ಗಳು ಅವೆ. ನೂರು ರೂ. ಗಳ ನೋಟು ಎಷ್ಟು ಬರುವವು ? ಬಿಡಿ ರೂ. ಗಳು ಎಷ್ಟು ಉಳಿಯುವವು.

೬. ೧೦೦ ರಿಂದ ಭಾಗಿಸಿದಾಗ ಎಕ್ಕಮು ದಹಮು ಸ್ಥಾನಗಳ ಅಂಕೆಗಳು ಯಾಕೆ ಬಾಕಿ ಉಳಿಯುವವು ?

**ಮಾ. ಲೆಕ್ಕ:— ೭. ೫೭೩೪** ಮಣಿಗಳಲ್ಲಿ **೨೦೦** ಮಣಿಗಳ ಸರಗಳು ಎಷ್ಟು ಆಗುವವು ? ಬಾಕಿ ಉಳಿಯುವ ಮಣಿಗಳು ಎಷ್ಟು ?

| | | | |
|---|---|---|---|
| **೨೦೦** | **೫೭೩೪** | **೩೪** ಬಾಕಿ. | **೨೮** ಸರಗಳಾಗಿ **೧೩೪** ಮಣಿ ಬಾಕಿ ಉಳಿಯುವವು. ಉತ್ತರ. |
| | **೨೮** | **೧೦೦** ಬಾಕಿ. | |
| | | **೧೩೪** ಬಾಕಿ. | |

**ಲೆಕ್ಕಗಳ ಗುಂಪು :—೧೬.**

೧. **೧೬೨೩೭** ಸೂಜಿಗಳನ್ನು **೨೦೦** ರಂತೆ ಪೊಟ್ಣ ಕಟ್ಟಿದರೆ ಪೊಟ್ಣ ಎಷ್ಟಾಗುವವು ?

೨. ಒಂದು ಸಣ್ಣ ಉಗಿಹಡಗದಲ್ಲಿ **೨೫೪೦೮** ಗೋದಿಯ ಚೀಲಗಳು ಬಂದವು. ಇವನ್ನು ಒಂದೊಂದು ಮಾಲಡಬ್ಬಿಯಲ್ಲಿ **೨೦೦** ಚೀಲದಂತೆ ಹೇರಿದರೆ, ಎಷ್ಟು ಡಬ್ಬಿ ತುಂಬುವವು ?

೩. **೫೧೨೦೦** ವಿಳೆದೆಲೆಗಳನ್ನು ಟಪಾಲಿನಿಂದ ಕರಾಚಿಗೆ ಕಳಿಸುವದಿದೆ. ಒಂದೊಂದು ಬಂಗಿಯಲ್ಲಿ **೮೦೦** ಎಲೆ ಹಾಕಿದರೆ ಎಷ್ಟು ಬಂಗಿ ಆಗುವವು ?

೪. ಒಂದು ಛಾಪಖಾನೆಯಲ್ಲಿ **೭೫೦೦೩೮** ಕಾಗದ ಇವೆ. ಒಂದು ಗಡ್ಡಿಗೆ **೫೦೦** ಕಾಗದ; ಆದರೆ ಅಲ್ಲಿ ಎಷ್ಟು ಗಡ್ಡಿ ಕಾಗದವಿದೆ ? ಹೆಚ್ಚಾದ ಕಾಗದ ಎಷ್ಟು ?

| | | ಅ. | ಬ. | ಕ. | ಡ. | ಇ. | ಫ. |
|---|---|---|---|---|---|---|---|
| ೫. | **೧೪೦೮೦೯** ÷ | **೩೦೦,** | **೪೦೦,** | **೫೦೦,** | **೬೦೦,** | **೭೦೦,** | **೮೦೦** |
| ೬. | **೯೦೫೦೬೩** ÷ | **೨೦೦,** | **೪೦೦,** | **೫೦೦,** | **೬೦೦,** | **೭೦೦,** | **೮೦೦** |
| ೭. | **೭೫೮೪೦೨** ÷ | **೩೦೦,** | **೪೦೦,** | **೫೦೦,** | **೬೦೦,** | **೭೦೦,** | **೮೦೦** |

**ಲೆಕ್ಕಗಳ ಗುಂಪು :—೧೭** ( ಉಜಳಣಿ )

೧. **೧೨** ಪೈ = **೧** ಆಣೆ; ಆದರೆ **೧೯೨** ಪೈಗೆ ಎಷ್ಟು ಆಣೆ ಬರುವವು ?

೨. **೩೩೬** ಆಣೆ ಕೊಟ್ಟು **ಅ.** ಅರ್ಧ ರೂ. **ಬ.** ರೂ. ಎಷ್ಟು ತರುವಿರಿ ?

೩. ಒಂದು ಎತ್ತಿಗೆ **೪೮**ರೂ. **೪೧೨೮**ರೂ. ಗೆ ಎಷ್ಟು ಎತ್ತು ಬರುವವು ?

೪. ಒಂದು ತೊಲೆ ಬಂಗಾರಕ್ಕೆ **೨೪** ರೂ. ನಮ್ಮಲ್ಲಿರುವ **೨೩೨೮** ರೂ. ಗೆ ಎಷ್ಟು ತೊಲೆ ಬಂಗಾರ ಬರುವದು ?

೫. **ಅ. ೪೬೯೭÷೨೭. ಬ. ೫೨೯೨÷೫೪. ಕ. ೯೭೩೨÷೬೩.**

೬. ಗೋಕರ್ಣಕ್ಕೆ **೩೭೮** ಜನರು **೧೮** ಮೋಟಾರುಗಳಲ್ಲಿ ಕುಳಿತು ಹೋದರು; ಪ್ರತಿಯೊಂದರಲ್ಲಿ ಎಷ್ಟು ಜನರಿದ್ದರು ?

೭. ಒಂದು ಹೌದಿನಲ್ಲಿ **೩೮೪** ಕೊಡ ನೀರು ಇವೆ. ನೀರು ಬಿಟ್ಟರೆ **೨೪** ಮಿನಿಟನಲ್ಲಿ ಹೌದು ಬರಿದಾಗುವದು. ಮಿನಿಟಗೆ ಎಷ್ಟು ನೀರು ಹೋಗುವದು ?

೮. ಎರಡು ಸಂಖ್ಯೆಗಳ ಗುಣಾಕಾರವು **೪೯೮೪** ಅದೆ; ಒಂದು ಸಂಖ್ಯೆಯು **೨೮** ಇರುವದು. ಆದರೆ ಎರಡನೆಯದು ಯಾವದು ?

೯. ಒಬ್ಬನು **೯೦** ದಿನಗಳಲ್ಲಿ **೨೧೬೦** ಮೈಲು ನಡೆದನು. ಅವನು ದಿನಾಲು ಎಷ್ಟು ಮೈಲು ನಡೆದಂತಾಯಿತು ?

೧೦. **೫೬** ಜನರಿಗೆ ಕಾಶಿಗೆ ಹೋಗಿಬರಲಿಕ್ಕೆ **೮೧೭೬** ರೂ. ಖರ್ಚಾಯಿತು. ಪ್ರತಿಯೊಬ್ಬನಿಗೆ ಎಷ್ಟು ಖರ್ಚು ಬಂದಂತಾಯಿತು.

**ಮಾ. ಲೆಕ್ಕ :—೮. ೪೬೦೫೩೦** ಇದಕ್ಕೆ **೨೫೮** ರಿಂದ ಭಾಗಿಸಿರಿ.

```
        ೧೭೮೫
    ೨೫೮|೪೬೦೫೩೦
       |೨೫೮
        ೨೦೨೫
        ೧೮೦೬
         ೨೧೯೩
         ೨೦೬೪
          ೧೨೯೦
          ೧೨೯೦
          ....
```

೨೫೮×೧= ೨೫೮
೨೫೮×೨= ೫೧೬
೨೫೮×೩= ೭೭೪
೨೫೮×೪=೧೦೩೨
೨೫೮×೫=೧೨೯೦
೨೫೮×೬=೧೫೪೮
೨೫೮×೭=೧೮೦೬
೨೫೮×೮=೨೦೬೪
೨೫೮×೯=೨೩೨೨

ಮೇಲೆ ತೋರಿಸಿದಂತೆ **೨೫೮** ರ ಮಗ್ಗಿಯನ್ನು ಬರೆದಿಟ್ಟುಕೊಂಡು ಎಷ್ಟರಿಂದ ಭಾಗಹತ್ತುವದೆಂಬದನ್ನು ತೀವ್ರ ಕಂಡುಹಿಡಿಯಬಹುದು.

**ಲೆಕ್ಕಗಳ ಗುಂಪು :—೧೮.**(ಉತ್ತರ ಸರಿಯೆಂದು ತಾಳೇ ನೋಡಿರಿ.)

೧. **೬೩೨೨೦೮** ಇದರಲ್ಲಿ **೩೨೮** ನ್ನು ಎಷ್ಟು ಸಾರೆ ಕಳೆಯಬಹುದು ?

೨. ಒಂದು ತಿಜೋರಿಯಲ್ಲಿ **೫೦೮೨೦೧** ರೂ. ಅವೆ. ಇವನ್ನು **೮೫೭** ಚೀಲಗಳಲ್ಲಿ ಸಮನಾಗಿ ಹಾಕಿಟ್ಟಿದ್ದಾರೆ. ಒಬ್ಬ ಅಮಲದಾರನಿಗೆ ಪಗಾರವೆಂದು ಒಂದು ಚೀಲ ಕೊಟ್ಟರು. ಆದರೆ ಅವನ ಪಗಾರವೆಷ್ಟು ?

೩. ಮಡಗಾವಿಯಿಂದ ಬಂದ **೫೭೬೮೩೦** ತೆಂಗಿನಕಾಯಿಗಳನ್ನು **೬೩೭** ರಂತೆ ಒಂದೊಂದು ಅಂಕಣದಲ್ಲಿ ಇಟ್ಟರೆ, ಎಷ್ಟು ಅಂಕಣ ಸ್ಥಳ ಬೇಕು ? ಎಷ್ಟು ಕಾಯಿ ಉಳಿಯುವವು ?

೪. ಒಂದು ದೊಡ್ಡ ಗಿರಣಿಯಲ್ಲಿ ತಾಸಿಗೆ **೫೮೩೮೬೦** ಯಾರ್ಡು ನೂಲು ಹೊರಡುವದು. ಒಂದು ಕಂಡಿಕೆಯಲ್ಲಿ **೩೬೨** ಯಾರ್ಡು ನೂಲು ಇದ್ದರೆ ಆ ಗಿರಣಿಯಲ್ಲಿ ಸುತ್ತುತ್ತಿರುವ ಕಂಡಿಕೆಗಳು ಎಷ್ಟು ?

೫. ಒಂದು ರೇಲ್ ಕಂಪನಿಯವರು ವರ್ಷದಲ್ಲಿ **೫೨೮೭೬೮** ಸ್ಕ್ರೂವೊಳೆ ಉಪಯೋಗಿಸುವರು. ಒಂದು ಪುಡಿಕೆಯಲ್ಲಿ **೮೬೪** ವೊಳೆ ಬರುತ್ತಿದ್ದರೆ, ಅವರು ಎಷ್ಟು ಪುಡಿಕೆ ತರಿಸಬೇಕು ?

ಭಾಜಕದ ಮಗ್ಗಿ ಬರೆದಿಟ್ಟುಕೊಂಡು ಕೆಳಗಿನ ಲೆಕ್ಕ ಮಾಡಿರಿ.

| | ಅ. | ಬ. | | ಅ. | ಬ. |
|---|---|---|---|---|---|
| ೬. | **೭೮೩೬ ÷ ೧೩೬**, | **೨೪೮.** | ೭. | **೮೫೦೪ ÷ ೨೩೫**, | **೩೧೬.** |
| ೮. | **೧೦೯೩೭ ÷ ೧೨೩**, | **೨೬೭.** | ೯. | **೧೨೦೨೬ ÷ ೩೪೯**, | **೪೬೫.** |
| ೧೦. | **೨೮೪೮೮ ÷ ೧೬೪**, | **೨೮೭.** | ೧೧. | **೨೭೬೦೩ ÷ ೪೮೪**, | **೫೭೬.** |
| ೧೨. | **೩೭೮೦೪ ÷ ೨೦೪**, | **೪೫೦.** | ೧೩. | **೩೮೦೦೨ ÷ ೬೦೮**, | **೭೩೬.** |

ಮಗ್ಗಿ ಬರೆದಿಟ್ಟುಕೊಳ್ಳದೆ ಕೆಳಗಿನ ಲೆಕ್ಕ ಮಾಡಿರಿ.

೧೪. **೩೬೦೪೭೨ ÷ ೪೫೦.** ೧೫. **೪೬೬೫೦೮ ÷ ೭೨೬.**

೧೬. **೬೦೯೦೨೫ ÷ ೭೦೬.** ೧೭. **೮೪೯೩೩೬ ÷ ೯೩೭.**

೧೮. **೫೦೮೪೧೨ ÷ ೪೫೬.** ೧೯. **೪೬೯೮೦೫ ÷ ೩೪೨.**

೨೦. **೭೫೬೭೪೨ ÷ ೬೧೪.** ೨೧. **೮೬೮೯೪೦ ÷ ೭೫೮.**

೨೨. **೩೧೫** ಇದು **೯೦೭೭೫** ರಲ್ಲಿ ಎಷ್ಟು ಸಾರೆ ಇರುವದು ?

೨೩. **೧೨೩೮೦೧೬** ಇದು **೮೩೨** ರ ಎಷ್ಟು ಪಟ್ಟು ಇರುವದು ?

೨೪. **೫೦೦೪೮** ÷ ? = **೧೨೮.** ೨೫. **೪೯೯೨೦** ÷ ? = **೩೯೦.**

**ಮಾ. ಲೆಕ್ಕ:— ೯. ೭೨೮೯೩೬ ರೂ. ಗಳನ್ನು ೯ ಜನರಲ್ಲಿ ಹಂಚಿರಿ.**

ಉದ್ದ ಭಾಗಾಕಾರ.

```
    ೮೦೯೯೨
  ---------
೯ | ೭೨೮೯೩೬
  | ೭೨
  -------
     ..೮೯
      ೮೧
     -----
      .೮೩
       ೮೧
      -----
       .೨೬
        ೧೮
       -----
      ೮ ಬಾಕಿ.
```

ಸಂಕ್ಷಿಪ್ತ ಭಾಗಾಕಾರ.

```
೯ | ೭೨೮೯೩೬
  ----------
  | ೮೦೯೯೨      ೮ ಬಾಕಿ
```

ಒಂಟಿ ಅಂಕೆಯಿಂದ ಭಾಗಿಸುವಾಗ ಸಂಕ್ಷಿಪ್ತ ಭಾಗಾಕಾರ ಮಾಡುವ ರೂಢಿ ಮಾಡಿಕೊಳ್ಳಬೇಕು.

**ಲೆಕ್ಕಗಳ ಗುಂಪು:— ೧೯.** (ಬಾಯಿಲೆಕ್ಕ)

೧. ೫೪೮ ಹಣ್ಣುಗಳಲ್ಲಿ ೪ ಪಾಲು ಮಾಡಿರಿ.

೨. ೪೧೨ ರೂ. ಗಳನ್ನು ಇಬ್ಬರಲ್ಲಿ ಹಂಚಿರಿ.

೩. ೬೪೪ ಗೋಲಿಗಳನ್ನು ೮ ಹುಡುಗರಿಗೆ ಕೊಡಿರಿ. ಒಬ್ಬನಿಗೆ ಎಷ್ಟು ಬರುವವು? ಬಾಕಿ ಎಷ್ಟು ಉಳಿಯುವವು?

೪. ೭೨೮ ರಲ್ಲಿ ೪ ಮತ್ತು ೭ ಭಾಗ ಮಾಡಿರಿ.

೫. ೮೭೦ ರೂ. ಗಳನ್ನು ೩, ೫, ೬, ೧೦ ಜನರಲ್ಲಿ ಹಂಚಿರಿ.

೬. ಅ. ೬೪, ೭೨, ಇವುಗಳ ೪ನೇ ಹಾಗು ೨ನೇ ಪಾಲು ಎಷ್ಟು?

ಬ. ೧೩೦೦ ರ ೧೦ನೇ ಹಾಗು ೧೦೦ನೇ ಪಾಲು ಎಷ್ಟು?

**ಲೆಕ್ಕಗಳ ಗುಂಪು:— ೨೦.** (ಸಂಕ್ಷಿಪ್ತ ಭಾಗಾಕಾರ ಮಾಡಿರಿ.)

| | ಅ ಬ ಕ ಡ | | ಅ ಬ ಕ ಡ |
|---|---|---|---|
| ೧. | ೩೪೭೫÷೨, ೩, ೪, ೫. | ೨. | ೪೦೩೬÷೪, ೫, ೬, ೭. |
| ೩. | ೮೭೫೬೪÷೩, ೪, ೫, ೬. | ೪. | ೯೪೦೩೨÷೫, ೬, ೮, ೭. |
| ೫. | ೩೦೮೦೭÷೭, ೮, ೬, ೯. | ೬. | ೪೦೦೨೧÷೫, ೭, ೬, ೪. |
| ೭. | ೧೯೦೦೪÷೪, ೬, ೫, ೮. | ೮. | ೨೦೦೦೨÷೬, ೭, ೮, ೯. |

## ಸಾಮಾನ್ಯ ಪ್ರಶ್ನಗಳು

**ಲೆಕ್ಕಗಳ ಗುಂಪು:— ೨೧.**

೧. ಕಲ್ಲನು ೩ ಆಣೆಗೆ ಒಂದರಂತೆ ೧೬ ಪಾಟಿ ಕೊಂಡನು. ಬಳಿಕ ಅವನಲ್ಲಿ ೨ ರೂಪಾಯಿ ಉಳಿದವು. ಅವನು ಅಂಗಡಿಗೆ ಒಯು ರೂ. ಎಷ್ಟು?

೨. ನನ್ನಲ್ಲಿ ೪೨ ರೂ. ಅವೆ. ೪ ರೂಪಾಯಿಯಂತೆ ೮ ಮಂದಿಗೆ ಕೊಟ್ಟೆ. ಬಳಿಕ ಎಷ್ಟು ರೂಪಾಯಿ ಉಳಿಯುವವು ?

೩. ರಾಮರಾಯನು ಎಷ್ಟೋ ಹಣ ಅಂಗಡಿಗೆ ಒಯ್ದನು. ೨೫ ರೂ. ಗೆ ಒಂದರಂತೆ ೧೨ ಸೀರೆ ಕೊಂಡು ೫೮ ರೂ. ತಿರುಗಿ ತಂದನು. ಅವನು ಒಯ್ದ ಹಣವೆಷ್ಟು ?

೪. ಒಬ್ಬ ಸಾವುಕಾರನು ೧೫೬ ಯಾರ್ಡು, ಮತ್ತೊಬ್ಬನು ೨೬೪ ಯಾರ್ಡು ಅರಿವೆಯನ್ನು ಬಡಹುಡುಗರ ಅಂಗಿಗೆಂದು ಕೊಟ್ಟನು. ಸಿಂಪಿಗನು ಅದರಲ್ಲಿ ೧೦೫ ಕೋಟು ಹೊಲಿದನು. ಒಂದು ಕೋಟಗೆ ಎಷ್ಟು ಅರಿವೆ ಹತ್ತಿತು.

೫. ಒಬ್ಬ ಕುರುಬನಲ್ಲಿದ್ದ ೨೦೧೪ ಕುರಿಗಳಲ್ಲಿ ೩೫೮ ಕುರಿ ಸತ್ತವು; ಕೂಡಲೆ ಅವನು ಉಳಿದ ಕುರಿಗಳನ್ನು ಸರಿಯಾಗಿ ೧೨ ಆಳುಗಳ ಸಂಗಡ ಬೇರೆ ಬೇರೆ ಊರಿಗೆ ಮಾರಲಿಕ್ಕೆ ಕಳಿಸಿದನು; ಒಬ್ಬ ಆಳು ಎಷ್ಟು ಕುರಿ ಒಯ್ದನು ?

೬. ಒಬ್ಬ ರೈತನು ೭ ಚಕ್ಕಡಿ ಕಬ್ಬು ತಂದನು. ಒಂದೊಂದು ಚಕ್ಕಡಿಯಲ್ಲಿ ೨೫೬ ಕಬ್ಬು ಇದ್ದವು. ೮ ಮಂದಿ ಮಾಲಗಾರರು ಇವನ್ನು ಹಂಚಿಕೊಂಡರೆ ಪ್ರತಿಯೊಬ್ಬನ ಪಾಲಿಗೆ ಎಷ್ಟು ಕಬ್ಬುಗಳು ಬಂದವು?

೭. ೪ತ್ರಿ ಆ. ಗೆ ಸೇರು ಬೆಣ್ಣೆಯಂತೆ ೧ ಧಡೆ ೩ ಸೇರು ಬೆಣ್ಣೆ ಕೊಂಡ ಬಳಿಕ ೧ ಸೇ. ಬೆಣ್ಣೆಯ ರೊಕ್ಕ ಉಳಿದರೆ ನಾವು ಒಯ್ದ ಹಣವೆಷ್ಟು ?

೮. ೨೪ ಸೇರು ಅಕ್ಕಿ ಹಿಡಿಯುವ ಚೀಲ ೪, ೪೫ ಸೇರಿನವು ೬, ೬೦ ಸೇರಿನವು ೫ ಅವೆ. ಇವೆಲ್ಲ ಚೀಲಗಳಲ್ಲಿಯ ಅಕ್ಕಿ ಎಷ್ಟು ?

೯. ಒಬ್ಬನು ೧೫ ರೂ. ಗೆ ಒಂದರಂತೆ ೧೨೦ ಸೀರೆ ಕೊಂಡು, ೧೭ ರೂ. ಗೆ ಒಂದರಂತೆ ಮಾರಿದರೆ, ಅವನಿಗೆ ಎಷ್ಟು ರೂ. ಲಾಭವಾಯಿತು ?

೧೦. ಒಬ್ಬ ರೈತನಲ್ಲಿ ೩೧೫೦ ರೂ. ಅವೆ. ಅವನು ೨೫೬ ರೂ. ಗೆ ಒಂದರಂತೆ ೯ ಹೋರಿ ಕೊಂಡನು. ಅವನಲ್ಲಿ ಎಷ್ಟು ರೂ. ಉಳಿದವು.

೧೧. ೨ ತೋಟಗಳಿಂದ ಬಂದ ೩೦೨೮, ೧೬೦೦ ಮಾವಿನ ಹಣ್ಣನ್ನು ೮೯ ಬುಟ್ಟಿಗಳಲ್ಲಿ ಸಮನಾಗಿ ಹಾಕಿದರೆ ಒಂದೊಂದರಲ್ಲಿ ಎಷ್ಟು ಹಣ್ಣುಗಳು ಆದವು ?

೧೨. ಒಂದು ಓಣಿಯಲ್ಲಿ ೧೧೫ ಮಂದಿಗೆ, ೨ನೆಯದರಲ್ಲಿ ೮೯ ಜನರಿಗೆ, ೩ನೆಯದರಲ್ಲಿ ೮೧ ಮಂದಿಗೆ ಊಟಕ್ಕೆ ಹೇಳಿ, ೧೯ ಸಾಲು ಎಲೆ ಹಾಕಿದೆವು. ಒಂದೊಂದು ಸಾಲಿನಲ್ಲಿ ಎಷ್ಟು ಎಲೆಗಳನ್ನು ಹಾಕ ಬೇಕಾಯಿತು ?

೧೩. ಜಾತ್ರೆಗೆ ಹೋಗುವಾಗ ೨೫ ಮೋಟಾರು ಬಾಡಿಗೆ ಮಾಡಿ ಒಂದೊಂದರಲ್ಲಿ ೧೮ ಜನ ಕೂತಿದ್ದರು. ತಿರುಗಿ ಬರುವಾಗ ಚಕ್ಕಡಿ ಬಾಡಿಗೆ ಮಾಡಿ ೯ ಜನರಂತೆ ಕೂತು ಬಂದರೆ ಎಷ್ಟು ಚಕ್ಕಡಿಗಳು ಬೇಕಾದವು ?

೧೪. ಒಬ್ಬ ತೋಟಿಗನು ೨೫೩೮ ಕ್ಯಾಬೀಜದ ಅಗಿಗಳನ್ನು ೫೪ ಸಾಲಿನಲ್ಲಿ ಹಚ್ಚಿದನು. ಅವನ್ನೇ ೧೮ ಸಾಲಿನಲ್ಲಿ ಹಚ್ಚಿದ್ದರೆ ಒಂದು ಸಾಲಿನಲ್ಲಿ ಎಷ್ಟು ಅಗಿಗಳು ಕೂಡುತ್ತಿದ್ದವು ?

೧೫. ಒಂದು ಜಾತ್ರೆಗೆ ಮೂರು ಊರುಗಳಿಂದ ೧೨೬, ೨೮೮, ೪೫೦ ಜನರು ಮೋಟಾರುಗಳಿಂದ ಬಂದರು. ಒಂದೊಂದು ಮೋಟಾರದಲ್ಲಿ ೧೮ ಮಂದಿ ಬಂದಿದ್ದರೆ ಅವರು ಕುಳಿತು ಬಂದ ಮೋಟಾರಗಳೆಷ್ಟು ?

೧೬. ಇಲಕಲದಲ್ಲಿ ಐದು ಜನ ನೇಕಾರರಲ್ಲಿ ತಯಾರಾದ ೧೬೪, ೨೦೮, ೩೧೬, ೪೨೮, ೨೨೯, ಸೀರೆಗಳನ್ನು ೨೧ ಗಂಟುಕಟ್ಟಿ ಮುಂಬಯಿಗೆ ಕಳಿಸಿದರೆ, ಒಂದು ಗಂಟಿನಲ್ಲಿ ಎಷ್ಟು ಸೀರೆಗಳಾಗುವವು ?

೧೭. ಒಂದು ಗಣಿತ ಪುಸ್ತಕದಲ್ಲಿದ್ದ ೫೫೬ ಲೆಕ್ಕಗಳಲ್ಲಿ ನಿಂಗನು ೨೬೮ ಬಿಡಿಸಿದ್ದನು. ಉಳಿದವುಗಳನ್ನು ೧೮ ದಿನದಲ್ಲಿ ಮಾಡಿ ಮುಗಿಸಬೇಕಾಗಿತ್ತು. ಅವನು ದಿನಾಲು ಎಷ್ಟು ಲೆಕ್ಕಗಳನ್ನು ಮಾಡಬೇಕಾಯಿತು ?

೧೮. ೪೦೫೦೦ ಹಾಳೆ ತರಿಸಿ ೩೫೫ ಜಮಾಖರ್ಚಿನ ವಹಿ ಕಟ್ಟಿಸಿದೆವು. ೫೦೦೦ ಹಾಳೆ ಉಳಿದವು. ಒಂದು ವಹಿಗೆ ಎಷ್ಟು ಹಾಳೆಗಳು ಹತ್ತಿದವು ?

೧೯. ಒಂದು ಗೋದಿಯ ಕಣದಲ್ಲಿ ೧೬೨೯ ಬುಟ್ಟಿ ಗೋದಿ ಆಯಿತು. ೧೧೩೨ ಬುಟ್ಟಿ ಗೋದಿ ಹಗೆಗೆ ಹಾಕಿದರು. ಮಿಕ್ಕದ್ದನ್ನು ೭೧ ಚೀಲಗಳಲ್ಲಿ ತುಂಬಿಟ್ಟರು. ಆದರೆ ಒಂದೊಂದರಲ್ಲಿ ಎಷ್ಟು ಬುಟ್ಟಿ ಗೋದಿ ಹಾಕಿದ್ದರು ?

೨೦. ಒಬ್ಬನು ಹಲಸಿನ ಹಣ್ಣು ಬಿಚ್ಚಿ ೧೨ ತೊಳೆಗಳಂತೆ ೪ ಜನರು ತಿಂದು, ಮಿಕ್ಕವುಗಳನ್ನು ಒಬ್ಬನಿಗೆ ೩ ರಂತೆ ೨೫ ಹುಡುಗರಿಗೆ ಕೊಟ್ಟನು. ಆ ಹಣ್ಣಿನಲ್ಲಿದ್ದ ಒಟ್ಟು ತೊಳೆಗಳೆಷ್ಟು ?

೨೧. ಭೀಮರಾಯನು ಒಬ್ಬನಿಂದ ೫೬ ರೂ. ಯಂತೆ ೮ ಜನ ಗೆಳೆಯರಿಂದ ಕೈಗಡ ತಂದನು. ಅವನಲ್ಲಿ ೧೨೭ ರೂ. ಇದ್ದವು. ಇವನ್ನೆಲ್ಲ ಕೊಟ್ಟರೂ ೩೨೮ ರೂ. ಸಾಲ ಉಳಿಯಿತು. ಅವನಿಗೆ ಇದ್ದ ಸಾಲವೆಷ್ಟು ?

೨೨. ಒಬ್ಬ ಅಂಗಡಿಕಾರನು ೭ ರೂ. ಗೆ ಒಂದು ಮಣದಂತೆ ೨೨೭ ಮಣ ಎಣ್ಣೆ ತಂದು ೫ ರೂ. ಗೆ ಮಣದಂತೆ ಮಾರಿದನು. ಅವನು ಎಷ್ಟು ರೂ. ಕಳಕೊಂಡನು ? ( ಸಂಕ್ಷಿಪ್ತ ರೀತಿಯಿಂದ ಮಾಡಿರಿ. )

೨೩. ಒಬ್ಬನಲ್ಲಿ ೬೫೧ ಸೇರು ಅಕ್ಕಿ ಅದೆ. ಅವನು ೧ ರೂ. ಗೆ ೭ ಸೇರಿನಂತೆ ೮೮ ರೂ. ಯ ಅಕ್ಕಿ ಮಾರಿದನು. ಉಳಿದದ್ದನ್ನು ಮನೆಗೆ ಒಯ್ದನು; ಮನೆಗೆ ಒಯ್ದ ಅಕ್ಕಿಯ ಬೆಲೆಯು ಎಷ್ಟು ಆಗುವದು ?

೨೪. ಒಬ್ಬನಲ್ಲಿ ೬೦೦ ಕುರಿ ಅವೆ. ಅವನು ೧೫೮ ಕುರಿ ಇಟ್ಟುಕೊಂಡು ಮಿಕ್ಕವುಗಳನ್ನು ೧೨ ರೂ. ಗೆ ಒಂದರಂತೆ ಮಾರಿದರೆ ಎಷ್ಟು ರೂ. ಬರುವವು ?

೨೫. ಒಬ್ಬ ಜವಳೀ ಅಂಗಡಿಯವನು ೨೫ ರೂ. ಗೆ ಒಂದರಂತೆ ೨೪ ಸೀರೆ ಕೊಂಡನು. ೨೨ ರೂ. ಗೆ ಒಂದರಂತೆ ಎಲ್ಲವನ್ನೂ ಮಾರಿದರೆ ಅವನಿಗೆ ಎಷ್ಟು ರೂ. ಹಾನಿ ಆಯಿತು ? ( ಸಂಕ್ಷಿಪ್ತ ರೀತಿಯಿಂದ ಮಾಡಿರಿ. )

೨೬. ಇಬ್ಬರು ಹುಡುಗರು ಸಾಲೆಯಿಂದ ಒಂದೇ ವೇಳೆಗೆ ಮನೆಗೆ ಓಡಹತ್ತಿದರು. ಒಬ್ಬನು ಮಿನಿಟಗೆ ೧೭೬ ಫೂ. ೨ನೆಯವನು ೧೩೨ ಫೂ. ಹೀಗೆ ೧೨ ಮಿನಿಟು ಓಡಿದ ಬಳಿಕ ಇಬ್ಬರ ನಡುವಿನ ಅಂತರವು ಎಷ್ಟಿತ್ತು ?

೨೭. ಒಬ್ಬನು ೬೦ ರೂ. ಗೆ ಒಂದು ಕುದುರೆ ಕೊಂಡು ತಿಂಗಳಿಗೆ ಮೇವಿನ ಬಗ್ಗೆ ೮ ರೂ. ಖರ್ಚು ಮಾಡಿ ೬ ತಿಂಗಳು ಸಾಕಿದನು. ಹಾಗು ತನಗೆ ೧೨ ರೂ. ಹೆಚ್ಚಿಗೆ ಬರುವಂತೆ ಮಾರಿದನು. ಎಷ್ಟು ರೂ. ಗಳಿಗೆ ಮಾರಿದನು ?

೨೮. ಒಂದು ಊರಲ್ಲಿ ೩೬ ಅಂಗಡಿಕಾರರು ೭೫೪೮ ಕಾಜಿನ ಭರಣಿಗಳನ್ನು ತರಿಸಿ ಹಂಚಿಕೊಂಡರು. ಆದರೆ ೧೩೨ ಭರಣಿ ಒಡೆದು ಬಂದವು. ಪ್ರತಿಯೊಬ್ಬನ ಪಾಲಿಗೆ ಎಷ್ಟು ಒಳ್ಳೇ ಭರಣಿಗಳು ಬಂದವು.

೨೯. ಒಂದೊಂದರಲ್ಲಿ ೫೮೩೬ ರೂ. ಗಳಂತೆ ೪೨ ಚೀಲಗಳಲ್ಲಿ ಇದ್ದ ರೂ. ಗಳನ್ನು ೧೪ ಚೀಲಗಳಲ್ಲಿ ತುಂಬಿಟ್ಟರೆ ಪ್ರತಿಯೊಂದರಲ್ಲಿ ಎಷ್ಟು ರೂ. ಆಗುವವು ! ( ಸಂಕ್ಷಿಪ್ತ ರೀತಿಯಿಂದ ಮಾಡಿರಿ. )

೩೦ ಒಂದು ಉಗಿಬಂಡಿಯು ಎಂಜಿನದ ದೊಡ್ಡ ಗಾಲಿಯು ಸುತ್ತಳತೆ ೧೬ ಫೂ. ಇದೆ. ಮುಂದಿನ ಸಣ್ಣ ಗಾಲಿಯದು ೭ ಫೂ. ಇದೆ. ದೊಡ್ಡ ಗಾಲಿಯು ೩೦೫೨ ಸಾರೆ ತಿರುಗಿದಾಗ ಸಣ್ಣದು ಎಷ್ಟು ಸಾರೆ ತಿರುಗಿರುವದು !

---

## ಅವಯುವಗಳಿಂದ ಗುಣಾಕಾರ.

ಒಂದು ಸಂಖ್ಯೆಗೆ ೬೩ ರಿಂದ ಗುಣಿಸುವದಿರುವದು. ೬೩=೭×೯ ; ಅಂದರೆ ೭, ೯ ಇವು ೬೩ ರ ಗುಣ್ಯ ಗುಣಕಗಳು, ಈ ಗುಣ್ಯ ಗುಣಕಗಳಿಗೆ **ಅವಯುವಗಳು** ಎಂದು ಅನ್ನುವರು. ೬೩ ರಿಂದ ಗುಣಿಸುವದಿರುವಾಗ ಮೊದಲು ೭ ರಿಂದ ಗುಣಿಸಿ ಬಂದ ಗುಣಾಕಾರಕ್ಕೆ ೯ ರಿಂದ ಗುಣಿಸಬಹುದು.

**ಮಾ. ಲೆಕ್ಕ:— ೧೦. ೬೪೨೪ × ೫೬.**

೫೬ = ೭ × ೮. ಆದ್ದರಿಂದ ಮೊದಲು ೭ ರಿಂದ ಗುಣಿಸಿ, ಬಂದ ಗುಣಾಕಾರಕ್ಕೆ ೮ ರಿಂದ ಗುಣಿಸಿರಿ.

```
 ೬೪೨೮                ಮೊದಲು ೮ ರಿಂದ ಗುಣಿಸಿ ಬಳಿಕ
   ×೭                ೭ ರಿಂದ ಗುಣಿಸಿದರೂ ಇದೇ ಉತ್ತರ
 ────
೪೪೯೯೬......೭ ಪಟ್ಟು ಬರುವದು. ಗುಣಿಸಿ ನೋಡಿರಿ.
   ×೮
 ─────
೩೫೯೯೬೮......೭ ಪಟ್ಟಿನ ೮ ಪಟ್ಟು. ( ಅಂದರೆ ೫೬ ಪಟ್ಟು ).
```

**ಲೆಕ್ಕಗಳ ಗುಂಪು:— ೨೨.** ( ಬಾಯಿಲೆಕ್ಕ ).

೧. ೨೫, ೩೬, ೪೨, ೫೪, ಇವುಗಳ ಗುಣ್ಯಗುಣಕಗಳನ್ನು ಹೇಳಿರಿ.

೨. ೬೪, ೭೨, ೮೧ ಇವು ಯಾವ ಎರಡು ಅವಯುವಗಳ ಗುಣಾಕಾರಗಳು!

೩. ೧೪೪ ರ ಒಂದು ಅವಯುವು **ಅ. ೧೨** ಇರುವಾಗ **ಬ. ೧೬** ಇರುವಾಗ ಇನ್ನೊಂದು ಅವಯವವು ಯಾವದು ಇರುವದು ?

೪. ಒಂದು ಕುದುರೆಗೆ ೫೦ ರೂ. ೨೪ ಕುದುರೆಗಳ ಬೆಲೆ ಏನು ?

**ಲೆಕ್ಕಗಳ ಗುಂಪು:—೨೩** (ಅವಯವ ತೆಗೆದು ಲೆಕ್ಕ ಮಾಡಿರಿ.)

೧. ಒಂದು ತೋಟದಲ್ಲಿ ೩೨೯ ಸಾಲು ಪೇರಲ ಗಿಡ ಅವೆ. ಒಂದೊಂದು ಸಾಲಿನಲ್ಲಿ ೧೮ ಗಿಡ ಇದ್ದರೆ, ಒಟ್ಟು ಅಲ್ಲಿರುವ ಗಿಡಗಳೆಷ್ಟು ?

೨. ಒಂದು ದೊಡ್ಡ ಪಟ್ಟಣದಲ್ಲಿ ೫೬೪ ಓಣಿ ಅವೆ. ಒಂದೊಂದು ಓಣಿಯಲ್ಲಿ ೨೧ ವಿದ್ಯುತ್ತಿನ ದೀಪ ಹಚ್ಚಿದ್ದಾರೆ. ಒಟ್ಟು ಎಷ್ಟು ದೀಪಗಳಿರುವವು?

೩. ಒಂದು ಗುಡ್ಡದಲ್ಲಿ ೬೫೮ ತೇಗಿನ ಗಿಡ ಅವೆ. ಇವನ್ನು ೪೮ ರೂ. ಗೆ ಒಂದರಂತೆ ಮಾರಿದರೆ ಸರಕಾರದವರಿಗೆ ಎಷ್ಟು ರೂ. ಗಳು ಬರುವವು!

೪. ಒಂದು ಕಮ್ಮಾರಸಾಲೆಯಲ್ಲಿ ೮ ಆಳು ಇರುವರು. ಒಬ್ಬೊಬ್ಬನು ವಾರದಲ್ಲಿ ೨೧೮ ಕುರಪಿ ಮಾಡಿದರೆ, ೨೮ ವಾರದಲ್ಲಿ ಎಷ್ಟು ಕುರಪಿ ಮಾಡುವರು ?

೫. ಒಬ್ಬ ಪೋಸ್ಟಮನ್ನನು ದಿನಾಲು ೩೧೫ ಪತ್ರ ಹಂಚುವನು. ಒಂದು ತಿಂಗಳಲ್ಲಿ ಅವನು ಹಂಚುವ ಪತ್ರಗಳೆಷ್ಟು ? (೧ ತಿಂಗಳ=೩೦ ದಿನ.)

೬. ಒಂದು ಕುಳ್ಳಬಾನದಲ್ಲಿ ೮೨೦ ಕುಳ್ಳಿನಂತೆ ೭೨ ಕುಳ್ಳಬಾನಗಳಲ್ಲಿರುವ ಒಟ್ಟು ಕುಳ್ಳುಗಳು ಎಷ್ಟು ಆಗುವವು ?

| | ಅ ಬ ಕ | | ಅ ಬ ಕ |
|---|---|---|---|
| ೭. | ೩೨೪×೧೪, ೧೬, ೨೪. | ೮. | ೪೬೭×೨೭, ೩೫, ೫೬. |
| ೯. | ೫೦೮×೧೬, ೧೮, ೨೧. | ೧೦. | ೫೭೬×೨೮, ೩೬, ೪೨. |
| ೧೧. | ೬೫೪×೧೮, ೧೫, ೨೭. | ೧೨. | ೬೦೭×೩೦, ೩೨, ೪೮. |
| ೧೩. | ೭೩೯×೩೬, ೫೪, ೬೩. | ೧೪. | ೭೫೮×೭೨, ೮೪, ೯೬. |

ಕೆಳಗಿನ ಲೆಕ್ಕಗಳಲ್ಲಿರುವ ಸಂಖ್ಯೆಗಳನ್ನು ಕ್ರಮವಾಗಿ ಗುಣಿಸಿರಿ.

೧೫. ೫ × ೫ × ೫=? ೧೬. ೭× ೮ × ೯ =? ೧೭. ೧೨×೯×೧೬=?

೧೮. ೨೫×೨೮×೭=? ೧೯. ೩೬×೪೨×೯=? ೨೦. ೧೫×೧೫×೧೫=?

೨೧. ೧೨೫× ೪೮×೧೨=? ೨೨. ೨೧೬×೮೦×೧೨೦=?

೨೩. ೪೭೮×೩೧೫×೨೦=? ೨೪. ೨೮×೨೮× ೨೮=?

# ಅವಯುವಗಳಿಂದ ಭಾಗಾಕಾರ.

೫೮೦೮÷೪೮.

| | |
|---|---|
| ೬ | ೫೮೦೮. |
| ೮ | ೯೬೮. |
| | ೧೨೧. ಉತ್ತರ. |

ಒಂದು ಸಂಖ್ಯೆಗೆ ೪೮ರಿಂದ ಭಾಗಿಸುವದಿರುವಾಗ (೬,೮ ಲೆ ೪೮ ಆದ್ದರಿಂದ) ಮೊದಲು ೬ರಿಂದ ಬಳಿಕ ಬಂದ ಉತ್ತರಕ್ಕೆ ೮ರಿಂದ ಭಾಗಿಸಬಹುದು.

**ಮಾ. ಲೆಕ್ಕ:— ೧೧. ೮೬೩೬÷೫೪.**

**೫೪=೬×೯.**

| | | |
|---|---|---|
| ೬ | ೮೬೩೬ | |
| ೯ | ೧೪೩೯ | ೬ ರ ಗುಂಪು, ಬಾಕಿ ೨. |
| | ೧೫೯ | ೫೪ ರ ಗುಂಪು, ಬಾಕಿ ೬ ರ ೮ ಗುಂಪು. |

ಇಲ್ಲಿ ಎರಡು ಬಾಕಿಗಳು ಬಂದಿವೆ. ಲಕ್ಷ್ಯಗೊಟ್ಟು ನೋಡಿರಿ. ಇವನ್ನು ಕೂಡಿಸಿ ಒಟ್ಟುಬಾಕಿ ತೆಗೆಯಬೇಕು. ಹೇಗಂದರೆ ಕೊನೆಗೆ ೬ರ ಗುಂಪುಗಳು ೮ ಅಂದರೆ ೪೮ ಉಳಿಯಿತು. ೬ರ ಗುಂಪು ಮಾಡಿದಾಗ ೨ ಮಾತ್ರ ಬಾಕಿ ಉಳಿದಿತ್ತು. ಆದ್ದರಿಂದ ಒಟ್ಟುಬಾಕಿ ೪೮+೨=೫೦; ಭಾಗಾಕಾರ ೧೫೯.

## ಲೆಕ್ಕಗಳ ಗುಂಪು:—೨೪.

೧. ಉಗಿಬಂಡಿಯು ಒಂದು ಡಬ್ಬಿಯಲ್ಲಿ ೪೮ ಕುರಿ ಒಯ್ಯುವರು. ೧೧೫೨ ಕುರಿ ಒಯ್ಯಲಿಕ್ಕೆ ಎಷ್ಟು ಡಬ್ಬಿಗಳು ಬೇಕಾಗುವವು?

೨. ಒಂದು ಡ್ರಾಯಿಂಗ ಹಾಳಿಯಲ್ಲಿ ೯೬ ಆಕೃತಿ ತೆಗೆಯಬಹುದು. ನಾವು ೨೧೧೨ ಆಕೃತಿ ತೆಗೆಯಬೇಕಾಗಿದೆ. ಎಷ್ಟು ಹಾಳಿಗಳನ್ನು ತರಬೇಕು?

೩. ೨೭ ಹುಡುಗರು ತೋಟಕ್ಕೆ ಹೋಗಿ ೨೦೦೯ ಹಣ್ಣು ಹರಿದು ಹಂಚಿಕೊಂಡರು. ಒಬ್ಬೊಬ್ಬನಿಗೆ ಎಷ್ಟು ಹಣ್ಣುಗಳು ಬಂದವು?

೪. ಮೇಲ ಗಾಡಿಯು ೩೩ ತಾಸುಗಳಲ್ಲಿ ೧೩೫೩ ಮೈಲು ಹೋದರೆ, ತಾಸಿಗೆ ಎಷ್ಟು ಮೈಲು ಹೋದಂತಾಯಿತು?

| | | ಅ. | ಬ. | ಕ. | | | ಅ. | ಬ. | ಕ. |
|---|---|---|---|---|---|---|---|---|---|
| ೫. | ೮೩೬÷ | ೧೬, | ೧೮, | ೨೧. | ೬. | ೭೫೨ ÷ | ೨೪, | ೨೮, | ೩೦. |
| ೭. | ೯೦೮÷ | ೧೨, | ೧೫, | ೨೪. | ೮. | ೮೭೨ ÷ | ೩೬, | ೪೨, | ೪೮. |
| ೯. | ೧೨೩೬÷ | ೩೨, | ೪೦, | ೪೨. | ೧೦. | ೧೦೦೪ ÷ | ೪೯, | ೫೪, | ೬೪. |

೧೧. ೨೪೮೯÷೫೬, ೬೦, ೬೩. ೧೨. ೨೨೩೦ ÷ ೭೨, ೭೫, ೮೪.
೧೩. ೩೮೭೩÷೬೪, ೮೧, ೯೬. ೧೪. ೪೭೫೮ ÷೧೧೨,೧೪೪,೧೦೮.
೧೫. ಗುಣಾಕಾರವು ೧೨೦೦; ಗುಣ್ಯವು ೨೫; ಆದರೆ ಗುಣಕವು ಎಷ್ಟು ?

## ಚಿಹ್ನಗಳು.

| ಚಿಹ್ನ | ಹೆಸರು. | ಅರ್ಥ. | ಕೃತಿ. | ಉದಾಹರಣ. |
|---|---|---|---|---|
| + | ಅಧಿಕ | ಹೆಚ್ಚು | ಕೂಡಿಸುವದು | ೬+೫=೧೧ |
| − | ಉಣಕ (ಉಣ) | ಕಡಿಮೆ | ಕಳೆಯುವದು | ೬−೫= ೧ |
| × | ಗುಣಕ (ಗುಣ) | ಪಟ್ಟು | ಗುಣಿಸುವದು | ೬×೫=೩೦ |
| ÷ | ಭಾಜಕ | ಪಾಲು | ಭಾಗಿಸುವದು | ೩೦÷೫= ೬ |

ಲೆಕ್ಕದಲ್ಲಿ × ಹಾಗು ÷ ಚಿಹ್ನಗಳು ಇರುವಾಗ ಎಡದಿಂದ ಬಲಕ್ಕೆ ಕೃತಿಮಾಡುತ್ತ ಹೋಗಬೇಕು.

ಮಾ. ಲೆಕ್ಕ :-೧೨. ಅ. ೭೨÷೧೮×೪. ಬ. ೭೨×೧೮÷೪. ಇವುಗಳ ಬೆಲೆ ಏನು ?

| | |
|---|---|
| ೭೨÷೧೮×೪ | ೭೨×೧೮÷೪ |
| =೪×೪ | =೧೨೯೬÷೪ |
| =೧೬. | =೩೨೪. |

ಲೆಕ್ಕದಲ್ಲಿ ಇವೆಲ್ಲ ಇಲ್ಲವೆ ಹಲವು ಚಿಹ್ನಗಳು ಇರುವಾಗ ಎಡದಿಂದ ಬಲಕ್ಕೆ ×, ÷ ಈ ಚಿಹ್ನ ಬಿಡಿಸಿಕೊಂಡು ಬಳಿಕ +, − ಇವನ್ನು ಬಿಡಿಸಬೇಕು.

ಮಾ. ಲೆಕ್ಕ :-೧೩. ೩೬+೩೦÷೬−೪. ಇದರ ಬೆಲೆ ಏನು ?

೩೬+೩೦÷೬−೪=೩೬+೫−೪=೪೧−೪=೩೭.

## ಲೆಕ್ಕಗಳ ಗುಂಪು :— ೨೫.

ಕೆಳಗಿನ ಲೆಕ್ಕಗಳ ಬೆಲೆ ತೆಗೆಯಿರಿ.

೧. ೭+೮×೫. ೨. ೯×೭−೪. ೩. ೧೨÷೪+೧೫.
೪. ೧೮−೧೮÷೬. ೫. ೭×೬−೪×೨+೧೨. ೬. ೬×೯+೩×೬−೧೫.
೭. ೭+೪÷೨+೯. ೮. ೪೨ ÷ ೭ + ೪೨ ÷ ೭ +೪೨−೭×೨.

# ರೂಪಾಂತರ

ರೂಪಾಂತರ ಅಂದರೆ ರೂಪ ಬದಲಿಸುವದು. (ಅ) ರೂಪಾಯಿಗಳಿಗೆ ಆಣೆ ಇಲ್ಲವೆ ಪೈ ಮಾಡುವದು ಇಳಿಕೆಯ ರೂಪಾಂತರವು.

(ಬ) ಪೈಗಳಿಗೆ ಆಣೆ ಇಲ್ಲವೆ ರೂಪಾಯಿ ಮಾಡುವದು ಏರಿಕೆಯ ರೂಪಾಂತರವು.

**ಸೂಚನೆ:**—ರೂಪಾಯಿ = ರೂ. ಆಣೆ = ಆ.

## ಇಳಿಕೆಯ ರೂಪಾಂತರ

**ಮಾ. ಲೆಕ್ಕ:—೧೫.** **೬೪** ಆಣೆಗೆ ಪೈ ಎಷ್ಟು ?

೧ ಆಣೆ = **೧೨** ಪೈ.
ಆದ್ದರಿಂದ **೬೪** ಆಣೆ=**೧೨**ಪೈ.×**೬೪**
= **೭೬೮** ಪೈ
ಉತ್ತರ.

ಇಲ್ಲಿ **೧೨**ಕ್ಕೆ **೬೪**ರಿಂದ ಗುಣಿಸುವ ಬದಲು ಆಣೆಗಳ ಸಂಖ್ಯೆಗೆ ಅಂದರೆ **೬೪**ಕ್ಕೆ **೧೨** ರಿಂದ ಗುಣಿಸಬಹುದು.

**೬೪**
×**೧೨**
**೭೬೮.**

**ಮಾ. ಲೆಕ್ಕ:—೧೬.** **೭೫** ರೂಪಾಯಿಗೆ ಆಣೆಗಳು ಎಷ್ಟು ?

೧ ರೂ = **೧೬** ಆಣೆ.
ಆದ್ದರಿಂದ **೭೫**ರೂ= **೧೬** ಆಣೆ × **೭೫**
=**೧೨೦೦** **ಆಣೆ.**
ಉತ್ತರ.

ಅಥವಾ ರೂ. ಗಳ ಸಂಖ್ಯೆಗೆ ಅಂದರೆ **೭೫**ಕ್ಕೆ **೧೬**ರಿಂದ ಗುಣಿಸಿದಾಗ ಬರುವ ಗುಣಾಕಾರವೇ ಆಣೆಗಳು.

**೭೫ × ೧೬ = ೧೨೦೦.**

## ಲೆಕ್ಕಗಳ ಗುಂಪು:—೨೭ (ಬಾಯಿಲೆಕ್ಕ)

೧. **೧೩** ಆ. ಮುರಿಸಿ ಎಷ್ಟು ಪೈ ತರುವಿರಿ ? ಎಷ್ಟು ದುಡ್ಡು ತರುವಿರಿ ?
೨. **೧** ರೂ. ಗೆ ದುಡ್ಡು ಎಷ್ಟು ? ಅರ್ಧ ದುಡ್ಡು ಎಷ್ಟು ?
೩. **೧೨** ರೂ. ಗೆ ಆಣೆ ಎಷ್ಟು ? ೪. **೨೫** ರೂ. **೧೨**ಆ. ಅವೆ. ಒಂದು ಪಾವಲಿಗೆ ಒಂದರಂತೆ ಎಷ್ಟು ಟೊಪ್ಪಿಗೆಗಳು ಬರುವವು ?
೫. **೩** ರೂ. ಯಲ್ಲಿ **೩** ಆಣೆಯ ಭಾಗಗಳೆಷ್ಟು ? ೬. **೨** ರೂ. ಯಲ್ಲಿ **೨/೩** ಆಣೆಯ ಭಾಗಗಳೆಷ್ಟು ? ೭. ನನ್ನ ಹತ್ತರ **೧೦** ರೂ. ಅವೆ. ಒಬ್ಬ ಭಿಕ್ಷುಕನಿಗೆ **೧** ಆ. ಕೊಟ್ಟರೆ ಎಷ್ಟು ಜನರಿಗೆ ಸಾಲುವವು ?
೮. **೩** ರೂ. ಯಲ್ಲಿ **೪** ಭಾಗ ಮಾಡಿದರೆ ಒಂದೊಂದು ಭಾಗದಲ್ಲಿ ಆ ಎಷ್ಟು?

## ಲೆಕ್ಕಗಳ ಗುಂಪು:— ೨೮.

೧. ಪೈ ಮಾಡಿರಿ. ೧೨೮ ಆ. ೩೪೫ ಆ. ೫೦೯ ಆ. ೬೧೭ ಆ.

೨. ಆಣೆ ಮಾಡಿರಿ. ೫೨ರೂ. ೯೯ ರೂ. ೨೧೭ ರೂ. ೩೪೫ ರೂ. ಆಣೆಯ ರೂಪ ಕೊಡಿರಿ.

೩. ೨೬೪ ರೂ. ೨೭೯ ರೂ. ೬೦೯ ರೂ. ೩೯೮ ರೂ. ೩೭೭ ರೂ.

೪. ೧ ಆ. ಗೆ ೧ ಕುಲಾಯಿ; ಆದರೆ ೧೪೫ ರೂ. ಗೆ ಎಷ್ಟು ?

೫. ೧ ದೌತಿಗೆ ೧ ಆ. ಆದರೆ ೬೮ ರೂ. ಕೊಟ್ಟು ಎಷ್ಟು ದೌತಿ ತರುವಿರಿ?

೬. ಒಬ್ಬ ಡೊಂಬರನ ಆಟಕ್ಕೆ ಒಬ್ಬೊಬ್ಬ ಹುಡುಗನಿಂದ೧ಆ.ತಕ್ಕೊಂಡು ಡೊಂಬರವನಿಗೆ ೩೬ ರೂ. ಕೊಟ್ಟವು; ಆಟಕ್ಕೆ ಬಂದ ಹುಡುಗರೆಷ್ಟು?

೭. ಅರ್ಧ ಆಣೆಗೆ ಒಂದು ಪೆನ್ಸಿಲು; ೪೪ ರೂ. ಗೆ ಎಷ್ಟು ಬರುವವು ?

೮. ೧ ಪೈಗೆ ೧ ಬಿರಡಿಯಂತೆ ೧೦೦ಆ. ಗೆ ಎಷ್ಟು ಬಿರಡಿಗಳು ಬರುವವು?

೯. ಮಾಸ್ತರರು ೯ ರೂ. ಒಯ್ದು ೧೩೯ ಹುಡುಗರಿಗೆ ೧ ಆಣೆಯ ತಿಕೀಟು ಕೊಡಿಸಿದರು. ಅವರ ಹತ್ತರ ಎಷ್ಟು ಆಣೆಗಳು ಉಳಿದವು?

೧೦. ಗೌಡರು ತಮ್ಮ ಮಗನ ಬಗ್ಗೆ ಮಾಸ್ತರರಲ್ಲಿ ೭ರೂ. ಇಟ್ಟು ದಿನಾಲು ಅವನಿಗೆ ೧ ಆ. ಕೊಡಹೇಳಿದರು. ಅದು ಎಷ್ಟು ದಿನ ಸಾಕಾಯಿತು?

**ಮಾ. ಲೆಕ್ಕ:**— ೧೭. ಅ. ೮ ಆ. ೬ ಪೈ. ಗೆ ಪೈ ಎಷ್ಟು ?
ಬ. ೫ ರೂ. ೧೩ ಆ. ಗೆ ಆಣೆ ಎಷ್ಟು ?

ಅ ದಲ್ಲಿ ಆಣೆಗೆ ಪೈ ಮಾಡಿ, ಕೊಟ್ಟ ಪೈ ಕೂಡಿಸಬೇಕು.

ಬ ದಲ್ಲಿ ರೂಪಾಯಿಗೆ ಆಣೆ ಮಾಡಿ, ಕೊಟ್ಟ ಆಣೆ ಕೂಡಿಸಬೇಕು.

| | | | |
|---|---|---|---|
| ಅ. ೮ ಆಣೆ ೬ ಪೈ | ೧ಆ=೧೨ಪೈ | ಬ. ೫ರೂ .೧೩ ಆಣೆ | ೧ರೂ=೧೬ಆ |
| +೯೬ ಪೈ | ೧೨ಪೈ×೮ | +೮೦ ಆಣೆ | ೧೬ಆ ×೫ |
| ೧೦೨ ಪೈ | =೯೬ | ೯೩ ಆಣೆ | =೮೦ ಆ |
| | ಅಥವಾ | | ಅಥವಾ |
| | ೮×೧೨ | | ೫×೧೬ |
| | =೯೬ | | =೮೦ |

## ಲೆಕ್ಕಗಳ ಗುಂಪು:— ೨೯. (ಬಾಯಿಲೆಕ್ಕ).

೧. ೧ರೂ. ೪ಆ; ೨ರೂ. ೧೨ಆ; ೫ರೂ. ೭ಆಣೆ. ಇವಕ್ಕೆ ಆಣೆ ಎಷ್ಟು?

೨. ೫ ಆ. ೬ ಪೈಗಳನ್ನು ಎಷ್ಟು ಹುಡುಗರಲ್ಲಿ ಹಂಚಿದರೆ ಒಬ್ಬನಿಗೆ ೧ ಪೈ ಬರುವದು ?

೩. ಪೈ ರೂಪ ಕೊಡಿರಿ. ೬ ಆ. ೭ಪೈ. | ೫ ಆ. ೪ ಪೈ. | ೮ ಆ. ೫ಪೈ.
೧೨ ಆ. ೧೧ಪೈ. | ೧೫ ಆ. ೯ ಪೈ. | ೧೩ ಆ. ೯ಪೈ.

೪. ಆಣೆಯ ರೂಪ ಕೊಡಿರಿ. ೩ರೂ. ೧೨ಆ; ೪ರೂ. ೯ಆ; ೫ರೂ. ೧೫ಆ.

೫. ೧೦ ರೂ. ೧೦. ಆಣೆಗಳಿಗೆ ಒಟ್ಟು ಆಣೆಗಳು ಎಷ್ಟು ಆಗುವವು ?

## ಲೆಕ್ಕಗಳ ಗುಂಪು: | ೩೦.

ಆಣೆಯ ರೂಪ ಕೊಡಿರಿ.

| | ರೂ. | ಆ. | | ರೂ. | ಆ. | | ರೂ. | ಆ. |
|---|---|---|---|---|---|---|---|---|
| ೧. | ೩೪ | ೪ | ೬. | ೪೬೨ | ೧೦ | ೧೧. | ೮೩೬ | ೭ |
| ೨. | ೪೫ | ೫ | ೭. | ೩೦೦ | ೬ | ೧೨. | ೬೩೮ | ೪ |
| ೩. | ೫೪ | ೯ | ೮. | ೩೯೬ | ೧೪ | ೧೩. | ೧೫೬೪ | ೬ |
| ೪. | ೧೪೦ | ೧೨ | ೯. | ೭೭೯ | ೧೦ | ೧೪. | ೧೭೦೬ | ೩ |
| ೫. | ೩೨೫ | ೧೩ | ೧೦. | ೯೪೫ | ೮ | ೧೫. | ೧೦೦೦ | ೧೧ |

ಅರ್ಧ ಆಣೆಯ ರೂಪ ಕೊಡಿರಿ.

| | ರೂ. | ಆ. | | ರೂ. | ಆ. | | ರೂ. | ಆ. |
|---|---|---|---|---|---|---|---|---|
| ೧೬. | ೨೩೯ | ೪ | ೨೦. | ೭೬೪ | ೬ | ೨೪. | ೧೨೪೫ | ೧೧ |
| ೧೭. | ೩೦೫ | ೭ | ೨೧. | ೮೩೯ | ೯ | ೨೫. | ೨೦೩೦ | ೧ |
| ೧೮. | ೪೫೬ | ೧೨ | ೨೨. | ೯೫೪ | ೧೨ | ೨೬. | ೨೦೨೮ | ೧೩ |
| ೧೯. | ೫೩೪ | ೧೨ | ೨೦. | ೯೦೮ | ೩ | ೨೭. | ೫೦೫ | ೭ |

ಕಾಲು ಆಣೆಯ ರೂಪ ಕೊಡಿರಿ

| | ರೂ. | ಆ. | | ರೂ. | ಆ. | | ರೂ. | ಆ. |
|---|---|---|---|---|---|---|---|---|
| ೨೮. | ೭೩೯ | ೩ | ೩೦. | ೨೦೫ | ೮ | ೩೨. | ೧೨೧೭ | ೮ |
| ೨೯. | ೮೩೨ | ೫ | ೩೧. | ೨೬೭೦ | ೧೦ | ೩೩. | ೩೪೪೭ | ೭ |

**ಮಾ. ಲೆಕ್ಕ:— ೧೮. ೪೩೮ ರೂ. ೭ ಆ. ೮ ಪೈ. ಗೆ ಪೈ ಮಾಡಿರಿ.**

೪೩೮ ರೂ. ೭ ಆ. ೮ ಪೈ.
×೧೬
೭೦೦೮ ಆ.
+೭ ಆ.
೭೦೧೫ ಆ.
×೧೨
೮೪೧೮೦ ಪೈ.
+೮ ಪೈ.
೮೪೧೮೮ ಪೈ. ಉತ್ತರ

**ಲೆಕ್ಕಗಳ ಗುಂಪು:—೩೧. (ಬಾಯಿಲೆಕ್ಕ)**

೧. ಒಂದು ನೋಟು ಬುಕ್ಕಿಗೆ ೨. ಆ. ಆದರೆ ೧೫ ರೂಪಾಯಿ ೪ ಆಣೆಗೆ ಎಷ್ಟು ಬುಕ್ಕುಗಳು ಬರುವವು ?

೨. ಒಂದು ಸೂಜಿಗೆ ೧ ಪೈ. ೧೩ ಆಣೆ ೬ ಪೈ. ಕೊಟ್ಟು ಎಷ್ಟು ಸೂಜಿಗಳನ್ನು ತರುವಿರಿ ?

೩. ಅರ್ಧ ಆಣೆಗೆ ಒಂದು ಪೇನಸೀಲು; ಆದರೆ ೩೧/೨ ಆ; ೭೧/೨ ಆ; ೮ ಆ. ೬ ಪೈಗೆ ಎಷ್ಟು ಪೇನಸೀಲು ಬರುವವು ?

೪. ಒಂದು ದುಡ್ಡಿಗೆ ೨ ಮಾವಿನಕಾಯಿ; ಆದರೆ ೪ಆ; ೬ಆ; ೮ಆ; ೫೧/೨ ಆ; ೭೧/೨ ಆ; ೧೦೧/೨ ಆ; ೯ ಆ; ೧೨ ಆ. ಗೆ ಎಷ್ಟು ಬರುವವು ?

೫. ಮೂರುವರೆ ರೂ. ಮುರಿಸಿ ಆಣೆ ತಂದು ೫೬ ಭಿಕ್ಷುಕರಿಗೆ ಕೊಟ್ಟರೆ ಒಬ್ಬೊಬ್ಬ ಭಿಕ್ಷುಕನಿಗೆ ಎಷ್ಟು ಆಣೆ ಬಂದವು ?

**ಲೆಕ್ಕಗಳ ಗುಂಪು:—೩೨.**

ಪೈ. ರೂಪ ಕೊಡಿರಿ.

| | ರೂ. | ಆ. | ಪೈ. | | ರೂ. | ಆ. | ಪೈ. | | ರೂ. | ಆ. | ಪೈ. |
|---|---|---|---|---|---|---|---|---|---|---|---|
| ೧. | ೦೮ | ೧೨ | ೫ | ೨. | ೨೫ | ೬ | ೭ | ೩. | ೩೯ | ೧೪ | ೯ |
| ೪. | ೫೯ | ೧೫ | ೧೧ | ೫. | ೧೧೪ | ೩ | ೩ | ೬. | ೧೫೬ | ೧೨ | ೯ |
| ೭. | ೧೯೯ | ೧೩ | ೬ | ೮. | ೨೦೮ | ೦ | ೨ | ೯. | ೨೮೭ | ೧ | ೫ |
| ೧೦. | ೩೦೦ | ೧೫ | ೧೧ | ೧೧. | ೩೫೪ | ೭ | ೭ | ೧೨. | ೩೯೫ | ೯ | ೧೦ |
| ೧೩. | ೪೮೨ | ೧೨ | ೯ | ೧೪. | ೫೦೩ | ೧೫ | ೩ | ೧೫. | ೫೪೭ | ೧೩ | ೪ |

**ಏರಿಕೆಯ ರೂಪಾಂತರ.**

(ಉಜಳಣಿ)

೧. ೩ಪೈ; ೬ಪೈ; ೯ಪೈ; ೧೫ಪೈ; ಇವಕ್ಕೆ ದುಡ್ಡು ಎಷ್ಟು ?

೨. ೬ ಪೈ; ೧೨ ಪೈ; ೧೮ ಪೈ; ೨೪ಪೈ; ಇವಕ್ಕೆ ಅರ್ಧ ಆ. ಎಷ್ಟು ?

೩. ೧೨, ೨೪, ೩೬, ೪೮, ೬೦ ಪೈ ಕೊಟ್ಟು ಎಷ್ಟು ಆಣೆಗಳನ್ನು ತರುವಿರಿ ?

೪. ೨೪, ೩೬, ೫೮, ೬೦, ೭೨ ಆ. ಕೊಟ್ಟು ಎಷ್ಟು ಪಾವಲಿ ತರುವಿರಿ!

೫. ೩೨, ೬೪, ೯೬, ೧೨೮, ೧೪೪ ಆ. ಕೊಟ್ಟು ಎಷ್ಟು ರೂ. ತರುವಿರಿ!

---

೩ಪೈ = ೧ ದುಡ್ಡು; ೪ ದುಡ್ಡು = ೧ ಆ; ೪ ಆ. = ೧ ಪಾವಲಿ ;
೪ ಪಾವಲಿ = ೧ ರೂ; ೧೨ ಪೈ = ೧ ಆ; ೧೬ ಆ. = ೧ ರೂ.

ಪೈಗೆ ದುಡ್ಡು ಮಾಡುವಾಗ ೩ ರಿಂದ, ಆಣೆ ಮಾಡುವಾಗ ೧೨ ರಿಂದ ಭಾಗಿಸಿರಿ. ಹಾಗು ಆ. ಗೆ ರೂಪಾಯಿ ಮಾಡುವಾಗ ೧೬ ರಿಂದ ಭಾಗಿಸಿರಿ.

**ಮಾ. ಲೆಕ್ಕ:— ೧೯.** ೨೦೦೦ ಪೈಗೆ ರೂ. ಆ. ಪೈ. ಮಾಡಿರಿ; ಇಲ್ಲಿ ಪೈಗಳಿಗೆ ಆಣೆ ಮಾಡಿಕೊಂಡು ಬಳಿಕ ರೂ. ಮಾಡಿರಿ.

ಈ ಲೆಕ್ಕದ ಉತ್ತರಕ್ಕೆ ಪೈ ರೂಪ ಕೊಟ್ಟು ನೋಡಿರಿ.

| | |
|---|---|
| ೧೨ \| ೨೦೦೦ ಪೈ | ೧೦ ರೂ. ೬ ಆ. ೮ ಪೈ. |
| ೧೬ \| ೧೬೬ ಆ. ಬಾಕಿ ೮ ಪೈ. | ೧೬೦ ಆ. ೧೬೬೦ ಪೈ. |
| ೧೦ ರೂ. ಬಾಕಿ ೬ ಆ. | ೧೬೬ ಆ. ೩೩೨ ಪೈ. |
| ೧೦ ರೂ. ೬ ಆ. ೮ ಪೈ. ಉತ್ತರ | ೨೦೦೦ ಪೈ. |

**ಸೂಚನೆ:—** ಏ. ರೂಪಾಂತರದ ಉತ್ತರವನ್ನು ಇ. ರೂಪಾಂತರ ಮಾಡಿ ಇ. ರೂಪಾಂತರದ ಉತ್ತರವನ್ನು ಏ. ರೂಪಾಂತರ ಮಾಡಿ ತಾಳೇ ನೋಡಿರಿ.

## ಲೆಕ್ಕಗಳ ಗುಂಪು:— ೩೩.

ಮುಂದೆ ಕೊಟ್ಟ ಆಣೆಗಳಿಗೆ ರೂ. ಮಾಡಿರಿ.

| | | |
|---|---|---|
| ೧. ೧೦೦೦ | ೫. ೪೨೧೫ | ೯. ೬೮೦೬ |
| ೨. ೨೦೦೧ | ೬. ೪೭೯೫ | ೧೦. ೫೦೦೯ |
| ೩. ೩೪೨೯ | ೭. ೫೦೮೪ | ೧೧. ೭೯೦೮ |
| ೪. ೩೯೦೬ | ೮. ೬೯೫೦ | ೧೨. ೧೦೦೦೦ |

ಮುಂದೆ ಕೊಟ್ಟ ಪೈಗಳಿಗೆ ಆಣೆ ಮಾಡಿರಿ.

| | | |
|---|---|---|
| ೧೧. ೧೦೮೪ | ೧೪. ೫೭೨೪ | ೧೭. ೭೦೦೦ |
| ೧೨. ೪೯೫೬ | ೧೫. ೬೮೨೫ | ೧೮. ೯೦೦೪ |
| ೧೩. ೫೦೯೮ | ೧೬. ೭೫೩೬ | |

೧೯. ಒಂದು ಟೊಪ್ಪಿಗೆಗೆ ೬ ಆ. ಆದರೆ ೨೦೫ ಟೊಪ್ಪಿಗೆಗಳ ಬೆಲೆ ಏನು ?

೨೦. ೩ ನೇ ಪುಸ್ತಕದ ಬೆಲೆ ೫ ಆ. ಇಂಥ ೧೮೩೫ ಪುಸ್ತಕಗಳ ಬೆಲೆ ಎಷ್ಟು?

೨೧. ೧ ಹಣ್ಣಿಗೆ ೧ ಆ. ಆದರೆ ೫೦೦ ಹಣ್ಣಿಗೆ ಏನು ಕೊಡಬೇಕು

೨೨. ಒಂದು ಪೌಂಡು ಬಿಸ್ಕೀಟಗೆ ೧೪ಆ. ಆದರೆ ೩೨ಪೌ. ನ ಬೆಲೆ ಏನು !

೨೩. ಖಾನಾವಳಿಯಲ್ಲಿ ಒಬ್ಬನ ಊಟಕ್ಕೆ ೬ ಆ. ಆಗುವದು. ೧೨೦೦ ಜನರು ಊಟ ಮಾಡಿದರೆ ಎಷ್ಟು ರೊಕ್ಕ ಖರ್ಚಾಗುವದು ?

೨೪. ಒಂದು ತಂಬಾಕಿನ ಗಿಡಕ್ಕೆ ೨ ಆ. ಆದರೆ ೪೮೫೦ ಗಿಡಕ್ಕೆ ಎಷ್ಟು?

**ಪರದೇಶದ ಹಣದ ಕೋಷ್ಟಕ.**

**೪ ಫಾರ್ದಿಂಗ =೧ ಪೇನಸು**
(ಫಾ) (ಪೇ.)

**೧೨ ಪೇನಸು =೧ ಶಿಲಿಂಗು** (ಶಿ.)

**೨೦ ಶಿಲಿಂಗು =೧ ಪೌಂಡು**(ಪೌ.)

**ಮಾ. ಲೆಕ್ಕ :—೨೦.**

(ಅ). ೧೪ ಪೌ. ೧೬ ಶಿ. ೩ ಪೇ. ಇದಕ್ಕೆ ಫಾರ್ದಿಂಗ ಮಾಡಿರಿ. ಇಲ್ಲಿ ಪೌಂಡುಗಳಿಗೆ ಶಿಲಿಂಗು, ಪೇನಸು ಮಾಡಿ ಮುಂದೆ ಸಾಗಿರಿ.

| | | | |
|---|---|---|---|
| ೧೪ ಪೌ. | ೧೬ ಶಿ. | ೩ ಪೇ. | ೦ ಫಾ. |
| | ೨೮೦ ಶಿ. | ೩೫೫೨ ಪೇ. | ೧೪೨೨೦ ಫಾ. |
| | ೨೯೬ ಶಿ. | ೩೫೫೫ ಪೇ. | ೧೪೨೨೦ ಫಾ. |

(ಬ). ೧೪೨೨೦ ಫಾರ್ದಿಂಗಿಗೆ ಪೌಂಡಿನ ರೂಪ ಕೊಡಿರಿ.

ಇಲ್ಲಿ ಫಾರ್ದಿಂಗುಗಳಿಗೆ ಮೊದಲು ಪೇನಸು, ಶಿಲಿಂಗು ಮಾಡಿ ಮುಂದೆ ಸಾಗಿರಿ.

| | |
|---|---|
| ೪ | ೧೪೨೨೦ ಫಾ. |
| ೧೨ | ೩೫೫೫ ಪೇ. |
| ೨೦ | ೨೯೬ ಶಿ. ಬಾಕಿ. ೩ ಪೇ. (೧೪ ಪೌ. ೧೬ ಶಿ. ೩ ಪೇ.) |
| | ೧೪ ಪೌ. ಬಾಕಿ ೧೬ ಶಿ. ಉತ್ತರ. |

## ಲೆಕ್ಕಗಳ ಗುಂಪು:— ೩೪. ( ಬಾಯಿಲೆಕ್ಕ )

೧. ಪೇನಸುಗಳಲ್ಲಿ ಹೇಳಿರಿ. ಅ. ೧ ಶಿ. ಬ. ೫ ಶಿ. ಕ. ೧ ಶಿ. ೮ ಪೇ. ಡ. ೨ ಶಿ. ೬ ಪೇ. ಇ. ೧ ಪೌ.

೨. ಶಿಲಿಂಗುಗಳಲ್ಲಿ ಹೇಳಿರಿ. ಅ. ೧ ಪೌ. ಬ. ೧ ಪೌ. ೮ ಶಿ. ಕ. ೨ ಪೌ. ೧೦ ಶಿ.

೩. ೪೦, ೮೦, ೧೨೦ ಶಿಲಿಂಗಿಗೆ ಪೌ. ಎಷ್ಟು ?

೪. ೧೪೪ ಪೇ. ಕೊಟ್ಟು ಎಷ್ಟು ಶಿಲಿಂಗು ತರುವಿರಿ ?

೫. ೧ ಪೇನಸಿನ ೧೨೦೦ ತಿಕೀಟು ಅವೆ, ಇವುಗಳ ಒಟ್ಟು ಬೆಲೆ ಎಷ್ಟು ?

## ಲೆಕ್ಕಗಳ ಗುಂಪು :— ೩೫.

| ಶಿಲಿಂಗು ಮಾಡಿರಿ. | | | ಪೇನಸು ಮಾಡಿರಿ. | | | | ಫಾರ್ದಿಂಗು ಮಾಡಿರಿ. | | | | |
|---|---|---|---|---|---|---|---|---|---|---|---|
| | ಪೌ. | ಶಿ. | | ಪೌ. | ಶಿ. | ಪೇ. | | ಪೌ. | ಶಿ. | ಪೇ. | ಫಾ. |
| ೧. | ೫ | ೧೩ | ೫. | ೦ | ೧೮ | ೪ | ೯. | ೦ | ೧೫ | ೬ | ೨ |
| ೨. | ೧೫ | ೩ | ೬. | ೨ | ೧೪ | ೬ | ೧೦. | ೨೭ | ೬ | ೯ | ೩ |
| ೩. | ೪೭ | ೧೬ | ೭. | ೨೫ | ೧೨ | ೮ | ೧೧. | ೩೫ | ೧೦ | ೮ | ೦ |
| ೪. | ೫೫ | ೧೯ | ೮. | ೩೮ | ೯ | ೭ | ೧೨. | ೫೬ | ೧೨ | ೦ | ೧ |

೧೩ ಅ. ೬ ಶಿ. ೧೦೨ ಪೌ. ಬ. ೧೬ ಶಿ. ೩೨೪ ಪೌ. ಕ. ೬೫೦ ಪೌ. ಇವಕ್ಕೆ ಶಿಲಿಂಗು ಮಾಡಿರಿ.

೧೪. ಪೇನಸು ಮಾಡಿರಿ. ಅ. ೩ ಪೆ. ೧೨ ಶಿ. ೫ ಪೌ. ಬ. ೬ ಪೌ. ೭ ಪೆ.

೧೫. ಫಾರ್ದಿಂಗು ಮಾಡಿರಿ. ಅ. ೧೨ ಪೌ. ೩ ಫಾ. ೬ ಪೆ. ಬ. ೧೭ ಶಿ. ೫ ಪೆ. ಕ. ೭ ಪೌ. ೧೦ ಪೆ. ೩ ಫಾ. ಡ. ೨೫ ಪೌ. ೩ ಫಾ.

೧೬. ಪೌ. ಶಿ. ಪೆ. ಗಳಲ್ಲಿ ಹೇಳಿರಿ. ಅ. ೮೯೭೩ ಪೆ. ಬ. ೭೪೯೧ ಫಾ. ಕ. ೯೦೦೦ ಅರ್ಧ ಪೆ. ಡ. ೪೯೮೩೬ ಫಾ. ಇ. ೧೦೦೦೦೦ ಪೆ.

೧೭. ೧ ಪೇ. ಗೆ ಒಂದರಂತೆ ೨೦ ಪೌ. ಗೆ ಎಷ್ಟು ಗೊಂಬೆಗಳು ಬರುವವು.

೧೮. ಒಂದು ಪುಸ್ತಕದ ಬೆಲೆ ೧೧ ಪೇ. ಇಂಥ ೫೦೦೦ ಪುಸ್ತಕದ ಬೆಲೆ ಎಷ್ಟು?

೧೯. ಒಬ್ಬನು ದಿನಾಲು ೪೦ ಪೇನಸು ದೊರಕಿಸುವನು. ವಾರದಲ್ಲಿ ೫ ದಿವಸ ಕೆಲಸ ಮಾಡಿ ೬ ವಾರದಲ್ಲಿ ಅವನು ಎಷ್ಟು ಹಣ ದೊರಕಿಸುವನು ?

೨೦. ಒಂದು ಪೇನ್ಸಿಲಿಗೆ ಅರ್ಧ ಪೇನ್ಸ ಆದರೆ ೮ ಗ್ರೋಸ ಪೇನ್ಸಿಲುಗಳಿಗೆಷ್ಟು ? ( ೧ ಗ್ರೋಸ = ೧೨ ಡಝನ. )

**೫ ರೂ; ೧೫ರೂ; ೨೮ರೂ. ಇವು ಒಂದೇ ಜಾತಿಯ ಪರಿಮಾಣಗಳು. ಇದರಂತೆ ೮ ಆ. ೧೨ ಆ. ೧೫ ಆ. ಇವೂ ಒಂದೇ ಜಾತಿಯ ಪರಿಮಾಣಗಳು. ಆದರೆ ೫ರೂ; ೧೨ಆ; ೭ಪೈ. ಇವು ೩ ಬೇರೆ ಬೇರೆ ಜಾತಿಯ ಪರಿಮಾಣಗಳು. ಇವಕ್ಕೆ ವಿವಿಧ (ಬೇರೆ ಬೇರೆ ಜಾತಿಯ) ಪರಿಮಾಣಗಳು ಎಂದು ಅನ್ನುವರು.**

೨ ರೂ, ೪ ಆ, ೩ ಪೈ. ಇವು ಬೆಲೆ ತೋರಿಸುತ್ತವೆ.

೫ ತೊಲೆ, ೨ ಮಾಸಿ, ೪ ಗುಂಜಿ.
೨ ಮಣ, ೩ ಧಡೆ, ೪ ಸೇರು. } ಇವು ಭಾರ ತೋರಿಸುತ್ತವೆ.

೮ ಚಿಟ್ಟೆ ೩ ಸೇರು ೨ ಕಾಲಪಾವು; ಇವು ಜೀನಸಿನ ಅಳತೆ ತೋರಿಸುತ್ತವೆ.

೧೫ ಯಾರ್ಡ್, ೨ ಫೂ, ೮ ಇಂಚು. ಇವು ಉದ್ದಳತೆ ತೋರಿಸುತ್ತವೆ.

೪ ತಾಸು, ೬ ಮಿನಿಟು, ೯ ಸೇಕಂದು ಇವು ವೇಳೆ ತೋರಿಸುತ್ತವೆ.

ಇವೆಲ್ಲ ವಿವಿಧ ( ಬೇರೆ ಬೇರೆ ಜಾತಿಯ ) ಪರಿಮಾಣಗಳು.

ಹೆಚ್ಚಿನ ಪರಿಮಾಣಕ್ಕೆ ಕಡಿಮೆ ಪರಿಮಾಣದ ರೂಪ ಕೊಡುವದು **ಇಳಿಕೆಯ ರೂಪಾಂತರವು;** ಕಡಿಮೆ ಪರಿಮಾಣಕ್ಕೆ ಹೆಚ್ಚಿನ ಪರಿಮಾಣದ ರೂಪ ಕೊಡುವದು **ಏರಿಕೆಯ ರೂಪಾಂತರವು.**

**ರೂಪಾಂತರ.** ( ತೂಕ; ಅಳತೆ )

**ತೂಕದ ಕೋಷ್ಟಕ**

| | |
|---|---|
| **೫ ತೊಲೆ** | **=೧ ಪಾವುಸೇರು.** |
| **೨ ಪಾವುಸೇರು** | **=೧ ಅಚ್ಛೇರು.** |
| **೨ ಅಚ್ಛೇರು** | **=೧ ಸೇರು.** |
| **೬ ಸೇರು** | **=೧ ಪಂಛೇರು.** |
| **೨ ಪಂಛೇರು** | **=೧ ಧಡೆ.** |
| **೪ ಧಡೆ** | **=೧ ಮಣ.** |
| **೮ ಮಣ** | **=೧ ಹೇರು.** |

( ಘಟ್ಟದ ಮೇಲೆ ಕಾರವಾರ ಜಿಲ್ಲೆಯಲ್ಲಿ ಮಾತ್ರ ೬ ತೊಲೆ=೧ ಪಾವುಸೇರು )

**ಮಾ, ಲೆಕ್ಕ :—೨೧.**

೫ ಮಣ, ೨ ಧಡೆ, ೧ ಪಂಛೇರು ಬೆಲ್ಲದ ಪಾಕದಲ್ಲಿ ಪಂಛೇರಿನ ಪೆಂಟಿಗಳು ಎಷ್ಟು ಆಗುವವು ?

ಇಲ್ಲಿ ಮಣ ಮತ್ತು ಧಡೆ ಇವುಗಳಿಗೆ ಪಂಛೇರಿನ ರೂಪ ಕೊಟ್ಟು ಲೆಕ್ಕದಲ್ಲಿ ಹೇಳಿದಷ್ಟು ಪಂಛೇರು ಕೂಡಿಸಿರಿ. ಎಷ್ಟು ಪಂಛೇರುಗಳು ಬರುವವೋ ಅಷ್ಟೇ ಪೆಂಟಿಗಳು ಆಗುವವು.

೫ ಮ. ೨ ಧ. ೧ ಪ.
೨೦ ಧ. ೪೪ ಪ.
೨೨ ಧ. ೪೫ ಪ.
೪೫ ಪೆಂಟಿ.

**ಮಾ. ಲೆಕ್ಕ:-೨೨.** ಪ್ರತಿಯೊಬ್ಬರಿಗೆ ಅರ್ಧ ಸೇರು ಬತ್ತಾಸ ದಂತೆ ಸಾಲೆಯಲ್ಲಿದ್ದ ೩೨೪ ಹುಡುಗರಿಗೆ ಕೊಟ್ಟರೆ ಎಷ್ಟು ಬತ್ತಾಸ ತರಬೇಕಾಗುವದು ?

ಇಲ್ಲಿ ೩೨೪ ಹುಡುಗರಿಗೆ ೩೨೪ ಅರ್ಧ ಸೇರು ಅಂದರೆ ೧೬೨ ಸೇರು ಬತ್ತಾಸ ಬೇಕಾಗುವದು. ಇದಕ್ಕೆ ಮಣದ ರೂಪ ಕೊಟ್ಟು ಉತ್ತರ ಇಡಬೇಕು.

| | | |
|---|---|---|
| ೬ | ೧೬೨ ಸೇ. | |
| ೨ | ೨೭ ಪ. | |
| ೪ | ೧೩ ಧ. | ಬಾಕಿ ೧ ಪಂಥೇರು. |
| | ೩ ಮ. | ಬಾಕಿ ೧ ಧಡೆ. |

ಆದ್ದರಿಂದ ೩ ಮ. ೧ ಧ. ೧ ಪಂಥೇರು ಬತ್ತಾಸ ಉತ್ತರ.

**ಲೆಕ್ಕಗಳ ಗುಂಪು:- ೩೬.**

೧. ಮನೆಯಲ್ಲಿ ೨ಮ. ೩ಧ. ಬೆಲ್ಲವಡೆ. ಎಷ್ಟು ಧಡೆ ಬೆಲ್ಲವಿದ್ದಂತಾಯಿತು?

೨. ೨ ಧ. ೧ ಪಂ. ೩ ಸೇರು ಸಕ್ಕರೆಯಲ್ಲಿ ಒಂದೊಂದು ಸೇರಿನ ಪೊಟ್ಟಣಗಳು ಎಷ್ಟು ಆಗುವವು ?

೩. ಒಂದು ಬೆಲ್ಲದ ಕುಳ್ಳಿಯ ತೂಕವು ೧ ಸೇರು ಆದರೆ ೧೪೪ ಕುಳ್ಳಿಗಳ ತೂಕವು ಎಷ್ಟು ಆಗುವದು ?

೪. ೧ ಮ. ೨ ಧ. ೪ಸೇರು ಕಬ್ಬಿಣ ಕೊಂಡು, ೧ ಸೇರು ತೂಕದ ಕುರ್ಪಿಗಳನ್ನು ಮಾಡಿಸಿದರೆ ಎಷ್ಟು ಆಗುವವು ?

೫. ೧ ಧ. ೧ ಪಂಥೇರು ತೂಕದ ಹಾರೆಗಳು ೪ ಅವೆ. ಆ ಕಬ್ಬಿಣದಲ್ಲಿ ೩ ಸೇರಿನ ತೂಕದ ಕಲ್ಲುಗಳನ್ನು ಮಾಡಿಸಬೇಕಾಗಿದೆ. ಎಷ್ಟು ಆಗುವವು ?

**ಬೆಳ್ಳಿ ಬಂಗಾರದ ತೂಕದ ಕೋಷ್ಟಕ.**

**೮ ಗುಂಜಿ ( ಗು. ) = ೧ ಮಾಸಿ ( ಮಾ. )**

**೧೨ ಮಾಸಿ. = ೧ ತೊಲೆ ( ತೊ. )**

**೨೪ ತೊಲೆ. = ೧ ಸೇರು ( ಸೇ. )**

೧ ತೊಲೆ ಅಂದರೆ ೧ ರೂ. ತೂಕ.

**ಮಾ. ಲೆಕ್ಕ:— ೨೩.** ೫ ತೊಲೆ ೬ ಮಾಸಿ ೫ ಗುಂಜಿಗೆ, ಗುಂಜಿಯ ರೂಪಕೊಡಿರಿ.

೫ ತೊ. ೬ ಮಾ. ೫ ಗು.

೬೦ ಮಾ. ೫೨೮ ಗು.

೬೬ ಮಾ. ೫೩೩ ಗು. ಉ.

ಮೊದಮೊದಲು ಕಚ್ಚಾ ಕೆಲಸವನ್ನು ಕೆಳಗೆ ತೋರಿಸಿದಂತೆ ಪಾಟಿಯ ಬಲ ಗಡೆಗೆ ಮಾಡಬಹುದು.

| | |
|---|---|
| ೫ | ೬೬ |
| ×೧೨ | ×೮ |
| ೬೦ ಮಾ. | ೫೨೮ ಗು. |

೫೩೩ ಗುಂಜಿಗೆ ತೊಲೆಯ ರೂಪ ಕೊಟ್ಟು ತಾಳೇ ನೋಡಿರಿ.

೮ | ೫೩೩ ಗು.

೧೨ | ೬೬ ಮಾ. ಬಾಕಿ ೫ ಗು.

೫ ತೊ. ಬಾಕಿ ೬ ಮಾ.

೫ ತೊ. ೬ ಮಾ. ೫ ಗು. ಉತ್ತರ.

**ಲೆಕ್ಕಗಳ ಗುಂಪು:—೩೭.**

೧. ಅ. ೧೦ ಮಾಸಿ ಬ. ೫ ಮಾ. ೨ ಗು. ಕ. ೧ ತೊ. ೧ ಮಾ. ೧ ಗು. ಇವಕ್ಕೆ ಗುಂಜಿ ಮಾಡಿರಿ.

೨. ಅ. ೨ ತೊ. ೪ ಮಾ. ಬ. ೩ ತೊ. ೭ ಮಾ. ಇವಕ್ಕೆ ಮಾಸಿ ಮಾಡಿರಿ.

೩. ೧ ಗು. ಬಂಗಾರಕ್ಕೆ ೧ ಪಾವಲಿ ಆದರೆ ೯ ಮಾ. ೬ ಗು. ಗೆ ಎಷ್ಟು ?

೪. ೩೨ ಬಂಗಾರದ ಗುಂಡಿನ ಒಂದು ಸರ ಅದೆ. ಒಂದೊಂದು ಗುಂಡಿನ ತೂಕ ೩ ಗು. ಆದರೆ ಆ ಸರದ ತೂಕವೆಷ್ಟು ?

೫. ಅ. ಅರ್ಧ ತೊಲೆ. ಬ. ಅರ್ಧ ಮಾಸಿ ಇವಕ್ಕೆ ಗುಂಜಿ ಎಷ್ಟು ?

೬. ೯೬ ಗುಂಜಿಗೆ ಮಾ. ಎಷ್ಟು ? ೭. ೪೮ ಮಾಸಿಗೆ ಗುಂಜಿ ಎಷ್ಟು ?

೮. ೩ ಮಾಸಿಯು ೩ ಗುಂಜಿಯ ಎಷ್ಟು ಪಟ್ಟು ?

೯. ೪ ತೊಲೆಯು ೪ ಮಾಸಿಯ ಎಷ್ಟು ಪಟ್ಟು ?

೧೦. ೪ ತೊ. ೬ ಮಾ. ಬಂಗಾರದಲ್ಲಿ ೩ ಗು. ತೂಕದ ಗುಂಡು ಎಷ್ಟಾಗುವವು?

೧೧. ಮುಂದಿನ ಪರಿಮಾಣಗಳಿಗೆ ತೊಲೆಯ ರೂಪ ಕೊಡಿರಿ.

ಅ. ೫೩೮ ಮಾ. ೮೬೫ ಮಾ. ೧೦೦೦ ಮಾ.

ಬ. ೧೫೩೮ ಗು. ೪೧೬ ಗು. ೪೦೯೬ ಗು.

೧೨. ಒಬ್ಬ ಸರಾಫನ ಹತ್ತರ ಬಂಗಾರದ ಗುಂಡಿನ ೫೪೮ ಸರ ಅವೆ. ಒಂದೊಂದು ಸರದಲ್ಲಿ ಒಂದು ಗುಂಜಿ ತೂಕದ ೨೪೦ ಗುಂಡು ಅವೆ. ಆ ಎಲ್ಲ ಸರಗಳಲ್ಲಿ ಕೂಡಿ ಎಷ್ಟು ತೊಲೆ ಬಂಗಾರವಿರುವದು ?

## ಪರದೇಶದ ತೂಕದ ಕೋಷ್ಟಕ.

| | | |
|---|---|---|
| ೧೬ ಔಂಸು (ಔ) | = ೧ ಪೌಂಡು | ( ಪೌ. ) |
| ೨೮ ಪೌಂಡು | = ೧ ಕ್ವಾರ್ಟರು. | ( ಕ್ವಾ. ) |
| ೪ ಕ್ವಾರ್ಟರು | = ೧ ಹಂಡ್ರೆಡ್ವೇಟ. | ( ಹ. ) |
| ೧೧೨ ಪೌಂಡು | = ೧ ಹಂಡ್ರೆಡ್ವೇಟ. | ( ಹ. ) |
| ೨೦ ಹ. | = ೧ ಟನ್. | ( ಟ. ) |

ಒಂದು ಔಂಸು ಅಂದರೆ ೨ ೧/೩ ತೊಲೆ ತೂಕ.

ಮಾ. ಲೆಕ್ಕ:—೨೪. (ಅ) ೧೫ ಪೌ. ೪ ಔಂಸು ಇದಕ್ಕೆ ಔಂಸು ಮಾಡಿರಿ.

| | |
|---|---|
| ೧೫ ಪೌ. ೪ ಔ. | ೧೫ |
| ೨೪೦ ,, | ×೧೬ |
| ೨೪೪ ಔ. ಉತ್ತರ. | ೨೪೦ |

(ಬ) ೨೪೪ ಔಂಸುಗಳಿಗೆ ಪೌಂಡಿನ ರೂಪ ಕೊಡಿರಿ.

೧೬ | ೨೪೪ ಔ.
೧೫ ಪೌ. ಬಾಕಿ ೪ ಔ. ೧೫ ಪೌ. ೪ ಔ. ಉತ್ತರ.

## ಲೆಕ್ಕಗಳ ಗುಂಪು:—೩೮.

೧. ೧ ಪೌ; ೫ ಪೌ; ೩ ಪೌ. ೮ ಔ. ಇವುಗಳಲ್ಲಿ ಔಂಸುಗಳೆಷ್ಟು ?

೨. ೨ ಕ್ವಾ; ೩ ಕ್ವಾ. ೧೬ ಪೌ. ಇವುಗಳಲ್ಲಿ ಪೌಂಡುಗಳೆಷ್ಟು ?

೩. ಒಂದು ಕ್ವಾ. ಇದು ೧ ಹ. ವೇಟನ ಎಷ್ಟನೇ ಪಾಲು ?

ಔಂಸಿನ ರೂಪ ಕೊಡಿರಿ.

೪. ಅ. ೧೨ ಪೌ. ೧೫ ಔ. ಬ. ೨೩ ಪೌ. ೧೦ ಔ.

೫. ಒಂದು ಲಗ್ನದಲ್ಲಿ ಒಂದು ಔಂಸು ಸಕ್ಕರೆಯ ಪುಡಿಕೆಗಳನ್ನು ೫೨೮ ಜನರಿಗೆ ಕೊಟ್ಟರು. ಒಟ್ಟು ಎಷ್ಟು ಪೌಂಡು ಸಕ್ಕರೆಯು ಬೇಕಾಯಿತು?

## ಉದ್ದಳತೆಯ ಕೋಷ್ಟಕ.

| | | |
|---|---|---|
| ೧೨ ಇಂಚು | = | ೧ ಫೂಟು ( ಫೂ. ) |
| ೩ ಫೂ. | = | ೧ ಯಾರ್ಡು (ಯಾ.) |
| ೧೭೬೦ ಯಾ. | = | ೧ ಮೈಲು (ಮೈ.) |
| ೮ ಫರ್ಲಾಂಗು | = | ೧ ಮೈಲು. |
| ೩ ಮೈ. | = | ೧ ಹರದಾರಿ. (ಹ.) |

**ಮಾ. ಲೆಕ್ಕ:— ೨೫.** (ಅ) ೧೮ ಯಾ. ೨ ಫೂ. ೪ ಇಂಚು ಇವುಗಳಿಗೆ ಇಂಚು ಮಾಡಿರಿ.

| | | |
|---|---|---|
| ೧೮ ಯಾ. | ೨ ಫೂ. | ೪ ಇಂಚು. |
| | ೫೪ ,, | ೬೭೨ ,, |
| | ೫೬ ಫೂ. | ೬೭೬ ಇಂಚು. |

(ಬ) ೬೭೬ ಇಂಚುಗಳಿಗೆ ಯಾರ್ಡು ಮಾಡಿರಿ.

| | | |
|---|---|---|
| ೧೨ | ೬೭೬ ಇಂಚು | |
| ೩ | ೫೬ ಫೂ. | ಬಾಕಿ ೪ ಇಂಚು. |
| | ೧೮ ಯಾ. | ಬಾಕಿ ೨ ಫೂ. |

ಆದ್ದರಿಂದ ೧೮ ಯಾ. ೨ ಫೂ. ೪ ಇಂಚು ಉತ್ತರ.

**ಲೆಕ್ಕಗಳ ಗುಂಪು:— ೩೯.** ( ಬಾಯಿಲೆಕ್ಕ ೧ ರಿಂದ ೪ )

೧. ೫ ಮೈಲಿನಲ್ಲಿ ಫರ್ಲಾಂಗು ಎಷ್ಟು ?

೨. ೪೮ ಫರ್ಲಾಂಗಿನಲ್ಲಿ ಮೈಲು ಎಷ್ಟು ?

೩. ೨೧ ಫೂಟಿನಲ್ಲಿ ಯಾರ್ಡು ಎಷ್ಟು ?

೪. ೬ ವಾರು (ಯಾರ್ಡು) ಅರಿವೆಯಲ್ಲಿ ಒಂದು ಫೂಟಿನ ತುಂಡುಗಳು ಎಷ್ಟು ?

೫. ೨ ಮೈಲು ೪ ಫರ್ಲಾಂಗಿಗೆ ಫರ್ಲಾಂಗು ಮಾಡಿರಿ.

೬. ೧ ಫರ್ಲಾಂಗಿನಲ್ಲಿ ಯಾರ್ಡುಗಳೆಷ್ಟು ?

೭. ೬೦, ೧೨೦, ೧೮೦, ೨೭೦ ಇಂಚಿನಲ್ಲಿ ಫೂ. ಎಷ್ಟು ?

೮. ೯ ಯಾ. ೨ ಫೂ. ೬ ಇ. ಗೆ ಇಂಚು ಮಾಡಿರಿ.

೯. ೭ ಯಾ. ೧ ಫೂ. ೯ ಇ. ಅರಿವೆಯನ್ನು ೧ ದುಡ್ಡಿಗೆ ೧ ಇಂಚಿನಂತೆ ಕೊಂಡರೆ ಎಷ್ಟು ರೊಕ್ಕ ಕೊಡಬೇಕಾಗುವದು ?

೧೦. ಒಂದು ಹೊಲದ ಸುತ್ತಳತೆ ೧ ಮೈ. ಅದೆ. ಅದರ ಸುತ್ತಲು ೪ಫೂಟಿಗೆ ಒಂದರಂತೆ ಕಂಬ ನಡಿಸಲಿಕ್ಕೆ ಎಷ್ಟು ಕಂಬಗಳು ಬೇಕು ?

೧೧. ಒಂದು ಗುಡಿಯ ಸುತ್ತಲಿನ ಪ್ರದಕ್ಷಣೆಯ ದಾರಿಯು ಅರ್ಧ ಮೈಲು ಇದೆ. ೧೬ ಇಂಚಿಗೆ ಒಂದು ನಮಸ್ಕಾರ ಹಾಕುತ್ತ ಹೋದರೆ, ಎಷ್ಟು ನಮಸ್ಕಾರಗಳಾಗುವವು ?

೧೨. ಒಂದು ಸಾಲೆಯು ಮುಂದಿನ ಕಟ್ಟೆಯು ಉದ್ದಳತೆ ೧೫೨೦ ಯಾರ್ಡು ಅದೆ. ಅಲ್ಲಿ ೨ ಫೂಟಿಗೆ ಒಬ್ಬನಂತೆ ಎಷ್ಟು ಹುಡುಗರು ಕೂಡಬಹುದು?

೧೩. ಒಂದು ಕೆರೆಯು ಸುತ್ತಳತೆಯು ೧೦೮೩೪ ಫೂ. ಅದೆ. ಒಬ್ಬ ಹುಡುಗನು ಅದರ ಸುತ್ತಲು ೧೦೮ ಸಾರೆ ಓಡಿದರೆ ಎಷ್ಟು ಮೈಲು ಓಡಿದಂತಾದೀತು ?

೧೪. ಒಂದು ಗಾಲಿಯ ಸುತ್ತಳತೆಯು ೯ ಫೂ. ಇದೆ. ಅದು ೧೫೩೦೫ ಸಾರೆ ತಿರುಗಿದಾಗ ಎಷ್ಟು ದೂರ ಹೋಗುವದು ? ಮೈ. ಫ. ದಲ್ಲಿ ಹೇಳಿರಿ.

೧೫. ನೆರೆಹಳ್ಳಿಯು ಎಷ್ಟು ದೂರ ಅದೆ ? ಎಂದು ಕೇಳಲು ಒಬ್ಬನು ಅಲ್ಲಿಗೆ ತನ್ನ ಹೆಜ್ಜೆಗಳು ೧೪೩೭೮ ಆಗುತ್ತವೆ ಎಂದನು. ಅವನ ಒಂದು ಹೆಜ್ಜೆಯು ೨ ಫೂ. ಆದರೆ ಆ ಹಳ್ಳಿಯು ಎಷ್ಟು ದೂರವಿತ್ತು ?

## ವೇಳೆಯ ಕೋಷ್ಟಕ.

| | | | | |
|---|---|---|---|---|
| ೬೦ ಸೇಕಂದು | = | ೧ ಮಿನಿಟು | ( ಮಿ. ) |
| ೬೦ ಮಿನಿಟು | = | ೧ ತಾಸು | ( ತಾ. ) |
| ೨೪ ತಾಸು | = | ೧ ದಿವಸ | ( ದಿ. ) |
| ೭ ದಿವಸ | = | ೧ ವಾರ | ( ವಾ. ) |
| ೩೬೫ ದಿವಸ | = | ೧ ವರ್ಷ | ( ವ. ) |

**ಮಾ. ಲೆಕ್ಕ:—೨೬.** (ಅ). ೫ ದಿ. ೪ ತಾ. ೨೯ ಮಿ. ಇವಕ್ಕೆ ಮಿನಿಟು ಮಾಡಿರಿ.

೫ ದಿ. ೪ ತಾ. ೨೪ ಮಿ.
೧೨೦ ತಾ. ೭೪೪೦ ಮಿ.
೧೨೪ ತಾ. ೭೪೬೪ ಮಿ.
೭೪೬೪ ಮಿ. ಉತ್ತರ.

೫
×೨೪
೧೨೦ತಾ.
೧೨೪
×೬೦
೭೪೪೦ ಮಿ..

(ಬ). ೭೪೬೪ ಮಿನಿಟಿಗೆ ದಿವಸ ಮಾಡಿರಿ.

| | | | |
|---|---|---|---|
| ೬೦ { | ೧೦ | ೭೪೬೪ ಮಿ. | |
| | ೬ | ೭೪೬ | ಬಾ. = ೪ ಮಿ. |
| | | ೧೨೪ | ಬಾ. ೨ × ೧೦ = ೨೦ ಮಿ. |
| ೨೪ { | ೬ | | ಬಾ. = ೨೪ ಮಿ. |
| | ೪ | ೨೦ | ಬಾ. = ೪ ತಾ. |

೫ ದಿ. [ ೫ ದಿ. ೪ ತಾ. ೨೪ ಮಿ. ] ಉತ್ತರ.

**ಲೆಕ್ಕಗಳ ಗುಂಪು:— ೪೦.**

೧. ಅ. ೩ ದಿ. ಬ. ೬ ತಾ. ಕ. ೩ ದಿ. ೧೦ ತಾ. ಇವಕ್ಕೆ ತಾಸು ಎಷ್ಟು?

೨. ೨ ದಿ. ೮ ತಾ. ಗೆ ಅ. ಅರ್ಧ ತಾಸುಗಳು ಎಷ್ಟು?
ಬ. ಕಾಲು ತಾಸುಗಳು ಎಷ್ಟು?

೩. ಅ. ೧೦ ತಾ. ಬ. ೧೫ ತಾ. ಕ. ೧೮ ತಾ. ಇವಕ್ಕೆ ಮಿನಿಟು ಎಷ್ಟು?

೪. ೧೨ ತಾ. ೪೮ ಮಿನಿಟುಗಳಲ್ಲಿ ೨೪ ಮಿ. ನ ಗುಂಪು ಎಷ್ಟು?

೫. ಅ. ೩ ಮಿ. ೨೦ ಸೆ. ಗೆ ಸೆ. ಎಷ್ಟು? ಬ. ೪೦೦ಸೆ. ಗೆ ತಾ. ಎಷ್ಟು?

೬. ಅ. ೬೦೦ ಮಿ. ಗೆ ತಾಸು. ಬ. ೧೨೦೦ ಮಿ. ಗೆ ದಿವಸ ಮಾಡಿರಿ.
ಮಿನಿಟು ಮಾಡಿರಿ.

೭. ೩ ದಿ. ೮ ತಾ. ೧೩ ಮಿ. ೮. ೯ ದಿ. ೪೫ ಮಿ. ೧ ತಾ.

೯. ೫ ವಾ. ೩ ದಿ. ೧೮ ತಾ. ೨೪ ಮಿ. ೧೦. ೧ ತಿಂ. ೫ ದಿ. ೮ ತಾ.

೧೧. ಮುಂದೆ ಕೊಟ್ಟ ಸೆಕಂದುಗಳನ್ನು ಮಿ. ಹಾಗು ಸೆ. ಗಳಲ್ಲಿ ಬರೆಯಿರಿ.
೪೬೪, ೭೦೩, ೮೭೯, ೧೦೦೦, ೧೨೩೬, ೧೫೬೦, ೧೮೦೪, ೩೦೦೦.

೧೨. ಮುಂದೆ ಕೊಟ್ಟವು ಮಿ. ಗಳು. ಇವುಗಳನ್ನು ತಾ. ಮಿ. ಗಳಲ್ಲಿ ಬರೆಯಿರಿ.
೧೪೦೩, ೧೬೪೮, ೧೮೫೭, ೨೫೦೦, ೨೮೦೪, ೩೫೦೬, ೪೦೦೮.

೧೩. ಮುಂದಿನ ತಾಸುಗಳಲ್ಲಿ ದಿವಸ, ತಾಸು ಎಷ್ಟಾಗುವವು?
೪೦೮, ೮೩೬, ೧೨೬೪, ೧೫೦೦.

**೧೪.** ಮುಂದಿನ ಮಿನಿಟುಗಳಲ್ಲಿ ದಿವಸ, ತಾಸು, ಮಿನಿಟು, ಎಷ್ಟಾಗುವವು?
**೧೫೬೯, ೨೮೪೫, ೩೨೧೮, ೫೫೩೧, ೫೬೦೦.**

೧೫. ಒಬ್ಬನು ೯ ವರ್ಷ ಎಂದು ಬರೆಯುವಾಗ ೯ ತಿಂಗಳು ಎಂದು ಬರೆದನು, ಅಂದರೆ ಅವನು ಎಷ್ಟು ತಾಸು ಕಡಿಮೆ ಬರೆದಂತಾಯಿತು?

---

## ವಿವಿಧ ಪರಿಮಾಣಗಳ ಬೇರೀಜು.

ಲೆಕ್ಕಗಳಲ್ಲಿ ತೋರಿಸಿದಂತೆ ಕೂಡಿಸುತ್ತ ಹೋಗಿರಿ.

೧. ೨ ಪೈ, ೪ ಪೈ, ೬ ಪೈ…೧ ಆ., ೧ ಆ. ೨ ಪೈ. ಹೀಗೆ ೩ ಆ. ವರೆಗೆ.
೨. ೩ ಪೈ. ೬ ಪೈ.………೧ ಆ., ೧ ಆ. ೩ ಪೈ. ಹೀಗೆ ೫ ಆ. ವರೆಗೆ.
೩. ೪ ಪೈ. ೮ ಪೈ.……೧ ಆ., ೧ ಆ. ೪ ಪೈ. ಹೀಗೆ ೬ ಆ. ೪ ಪೈ ವರೆಗೆ.
೪. ೫ ಪೈ, ೧೦ಪೈ…೧ಆ. ೩ಪೈ, ೧ಆ. ೮ಪೈ ಹೀಗೆ ೮ಆ. ೪ಪೈ ವರೆಗೆ.
೫. ೬ ಪೈ, ೧ ಆ. …… ೨ ಆ. ೬ ಪೈ ಹೀಗೆ ೧೨ ಆ. ವರೆಗೆ.
೬. ೭ಪೈ, ೧ಆ. ೨ಪೈ…೨ಆ. ೪ಪೈ. ೨ಆ. ೧೧ಪೈ ಹೀಗೆ ೧೪ಆ. ವರೆಗೆ.
೭. ೮ ಪೈ, ೧ ಆ. ೪ ಪೈ… ಹೀಗೆ ೧ ರೂ.
೮. ೬ ಆ., ೧೨ ಆ, ೧ ರೂ. ೨ ಆ. … ಹೀಗೆ ೪ ರೂ. ೮ ಆ. ವರೆಗೆ.

**ಮಾ ಲೆಕ್ಕ :—೨೭.** ಒಬ್ಬನು ಸಂತೆಯಲ್ಲಿ ೧೫ ರೂ. ೧೨ ಆ. ಯ ಅಕ್ಕಿ; ೪ರೂ. ೧೧ ಆ. ೬ ಪೈ ಯ ಬೆಣ್ಣೆ ಕೊಂಡನು. ಅವನ ಹತ್ತಿರ ೮ರೂ. ೬ ಆ. ೯ ಪೈ ಉಳಿದವು. ಅವನು ಸಂತೆಗೆ ಒಯ್ದ ಹಣವೆಷ್ಟು?

ಖರ್ಚಾದ ಹಣ, ಉಳಿದ ಹಣ ಕೂಡಿ ಅವನು ಒಯ್ದ ಹಣವು. ಆದ್ದರಿಂದ ಬೇರೀಜು. ಮೊದಲು ಪೈ ಕೂಡಿಸಿ, ಆಣೆ ಆದರೆ ಕೈಲಿ ಇಟ್ಟುಕೊಂಡು ಬಳಿಕ ಆಣೆ ಕೂಡಿಸಿ ರೂ. ಆದರೆ ಕೈಲಿ ಇಟ್ಟುಕೊಂಡು ರೂ. ಕೂಡಿಸಿರಿ.

| | ರೂ. | ಆ. | ಪೈ. |
|---|---|---|---|
| ಅಕ್ಕಿ | ೧೫ | ೧೨ | ೦ |
| ಬೆಣ್ಣೆ | ೪ | ೧೧ | ೬ |
| ಉಳಿದದ್ದು | ೮ | ೬ | ೯ |
| | ೧ | ೧ | |
| | ೨೮ರೂ. | ೧೪ ಆ. | ೩ ಪೈ. |

**ಲೆಕ್ಕಗಳಗುಂಪು:—೪೧(ಬಾಯಿಲೆಕ್ಕ)**

ಕೆಳಗೆ ಸಾಮಾನುಗಳ ೧ ಸೇರಿನ ಬೆಲೆ ಕೊಟ್ಟಿದೆ. ಅವನ್ನು ನೋಡಿ ಮುಂದೆ ಕೊಟ್ಟ ಲೆಕ್ಕಗಳಲ್ಲಿ ಹೇಳಿದ ಸಾಮಾನುಗಳ ಒಟ್ಟು ಬೆಲೆ ತೆಗೆಯಿರಿ.

| | ಆ. | ಪೈ. | | ಆ. | ಪೈ. |
|---|---|---|---|---|---|
| ಸಕ್ಕರೆ | ೧ | ೯ | ಕೊಬ್ಬರಿ | ೨ | ೩ |
| ಉತ್ತುತ್ತಿ | ೨ | ೬ | ಬೆಲ್ಲ | ೦ | ೯ |
| ಬದಾಮು | ೫ | ೬ | ತುಪ್ಪ | ೮ | ೬ |
| | | | ಹಾಲು | ೪ | ೦ |

(೧) ೧ ಸೇ. ಉತ್ತುತ್ತಿ, ೧ ಸೇ. ಸಕ್ಕರೆ. (೨) ೧ಸೇ. ಬೆಲ್ಲ, ೧ ಸೇ. ಬದಾಮು, ೧ ಸೇ. ಕೊಬ್ಬರಿ. (೩) ೨ ಸೇ. ಹಾಲು ೧ ಸೇ. ಸಕ್ಕರೆ, ೧ ಸೇ. ಉತ್ತುತ್ತಿ. (೪) ಒಂದೊಂದು ಸೇರು ತುಪ್ಪ, ಬೆಲ್ಲ, ಕೊಬ್ಬರಿ. (೫) ಒಂದೊಂದು ಸೇ. ತುಪ್ಪ, ಹಾಲು, ಸಕ್ಕರೆ, ಬದಾಮು. (೬) ೩ ಸೇ. ಹಾಲು, ಒಂದು ಸೇರು ಬದಾಮು ೧ ಸೇರು ಸಕ್ಕರೆ.

೭. ಸಂತೆಯ ದಿನ ೫ ರೂ. ೬ ಆ. ಆಳಿನ ಕೂಲಿ ಕೊಟ್ಟೆನು; ೩ ರೂ ೮ಆ. ಬೆಣ್ಣೆ, ೫ ಆ. ೬ ಪೈ. ಕಾಯಿಪಲ್ಲೆ ತಂದೆನು. ಒಟ್ಟು ಖರ್ಚಾದ ಹಣವೆಷ್ಟು ?

೮. ಆಳುಮಗನ ಕೈಯಲ್ಲಿ ಸಂತೆಯ ಖರ್ಚಿನ ಬಗ್ಗೆ ಹತ್ತು ರೂ. ಯ ನೋಟು ೨ ಬಿಡಿ ರೂ. ೧೫ಆ. ಕೊಟ್ಟೆನು. ಇದನ್ನೆಲ್ಲ ಖರ್ಚುಮಾಡಿದ್ದಲ್ಲದೆ ಅವನು ೭ ರೂ. ೮ ಆ. ಉದ್ರಿ ಮಾಡಿಕೊಂಡು ಬಂದನು. ಅವನು ತಂದ ಸಾಮಾನಿನ ಬೆಲೆ ಎಷ್ಟು ?

## ಲೆಕ್ಕಗಳ ಗುಂಪು:- ೪೨.

ಮೊದಲಿನ ೬ ಲೆಕ್ಕಗಳಲ್ಲಿ ಹೇಳಿದ ಸಾಮಾನುಗಳ ಒಟ್ಟು ಬೆಲೆ ತೆಗೆಯಿರಿ.

| | | ಆ. | ಪೈ. | | | ಆ. | ಪೈ. |
|---|---|---|---|---|---|---|---|
| ೧. | ಒಂದು ಕುಲಾಯಿ | ೩ | ೬ | ೨. | ಬಟಾಟೆ | ೪ | ೭ |
| | ನಾಲ್ಕು ಕಸಬರಿಗೆ | ೫ | ೦ | | ಸವತೇಕಾಯಿ | ೨ | ೯ |
| | ಚಿಮಣೀ ಎಣ್ಣೆ | ೨ | ೬ | | ಅವರೇಕಾಯಿ | ೩ | ೧೦ |
| ೩. | ಪೇನ್ಸಿಲು | ೦ | ೯ | ೪. | ೫ ಕಾರ್ಡು | ೩ | ೯ |
| | ೫ನೇ ಬುಕ್ಕು | ೫ | ೬ | | ಹಾಲು | ೪ | ೯ |
| | ಕಾಪೀ ಬುಕ್ಕು | ೧ | ೬ | | ಸಕ್ಕರೆ | ೫ | ೬ |
| | ದೌತಿ, ಮಸಿಪುಡಿ | ೨ | ೩ | | ಬೆಣ್ಣೆ | ೧೩ | ೯ |

| | | | | | |
|---|---|---|---|---|---|
| ೫. ಸಬಕಾರ | ೧ | ೬ | ೬. ಚಿಮಣೀ ಎಣ್ಣೆ | ೨ | ೯ |
| ಬೆಲ್ಲ | ೨ | ೬ | ಕಡ್ಡಿಪೆಟ್ಟಿಗೆ | ೦ | ೮ |
| ದಾರದ ಉಂಡಿ | ೨ | ೯ | ಮಣ್ಣಿನ ಕೊಡ | ೩ | ೩ |
| ಮಾವಿನಹಣ್ಣು | ೧೨ | ೯ | ಕಾಯಿಪಲ್ಲೆ | ೧ | ೬ |
| ಮಿಠಾಯಿ | ೯ | ೩ | ಕಬ್ಬು | ೦ | ೯ |

೭. ರಾಮನ ಹತ್ತರ ೫ ಆ. ೪ ಪೈ. ಅವೆ. ಭೀಮನ ಹತ್ತರ ಇದಕ್ಕಿಂತ ೨ ಆ. ೩ ಪೈ. ಹೆಚ್ಚು ಅವೆ. ಗೋವಿಂದನ ಹತ್ತರ ೩ ಆ. ೯ ಪೈ. ಅವೆ. ಮೂವರಲ್ಲೂ ಕೂಡಿ ಇರುವ ರೊಕ್ಕ ಎಷ್ಟು?

೮. ಕಲ್ಲನು ೩ ಆ. ೬ ಪೈ. ಸಾಲೆಯ ಫೀ ಕೊಟ್ಟನು; ಇದಕ್ಕೂ ೧ ಆಣೆ ೯ ಪೈ. ಹೆಚ್ಚು ಕೊಟ್ಟು ನೋಟು ಬುಕ್ಕು ತಂದನು. ಬಳಿಕ ಅವನ ಹತ್ತರ ೫ ಆ. ೯ ಪೈ. ಉಳಿದರೆ ಮೊದಲಿಗೆ ಅವನಲ್ಲಿದ್ದ ರೊಕ್ಕವೆಷ್ಟು?

ಬೇರೀಜು ಮಾಡಿರಿ.

| | ಆ. | ಪೈ. | | ಆ. | ಪೈ | | ಆ. | ಪೈ | | ಆ. | ಪೈ. |
|---|---|---|---|---|---|---|---|---|---|---|---|
| ೯. | ೭ | ೯ | ೧೦. | ೬ | ೮ | ೧೧. | ೮ | ೩ | ೧೨. | ೫ | ೭ |
| | ೫ | ೩ | | ೩ | ೯ | | ೨ | ೧೦ | | ೪ | ೮ |
| | ೨ | ೪ | | ೪ | ೬ | | ೫ | ೯ | | ೧೦ | ೩ |

| | ಆ. | ಪೈ. | | ಆ. | ಪೈ. | | ಆ. | ಪೈ. | | ಆ. | ಪೈ. |
|---|---|---|---|---|---|---|---|---|---|---|---|
| ೧೩. | ೬ | ೮ | ೧೪. | ೮ | ೩ | ೧೫. | ೭ | ೭ | ೧೬. | ೯ | ೫ |
| | ೩ | ೪ | | ೪ | ೭ | | ೨ | ೧೧ | | ೬ | ೭ |
| | ೫ | ೯ | | ೪ | ೪ | | ೫ | ೮ | | ೫ | ೧೦ |
| ೧೭. | ೮ | ೩ | ೧೮. | ೮ | ೬ | ೧೯. | ೯ | ೭ | ೨೦. | ೧೩ | ೪ |
| | ೯ | ೧೦ | | ೯ | ೫ | | ೭ | ೯ | | ೧೪ | ೭ |
| | ೭ | ೨ | | ೧೨ | ೭ | | ೬ | ೫ | | ೧೫ | ೧೦ |
| | ೪ | ೯ | | ೬ | ೧೧ | | ೫ | ೮ | | ೮ | ೯ |

| | ಶಿ. | ಪೆ. | | ಶಿ. | ಪೆ. | | ಶಿ. | ಪೆ. | | ಶಿ. | ಪೆ. |
|---|---|---|---|---|---|---|---|---|---|---|---|
| ೨೧. | ೧೫ | ೬ | ೨೨. | ೧೮ | ೫ | ೨೩. | ೦ | ೭ | ೨೪. | ೧೩ | ೫ |
| | ೧೯ | ೩ | | ೧೫ | ೯ | | ೧೯ | ೧೦ | | ೮ | ೭ |
| | ೮ | ೮ | | ೧೨ | ೬ | | ೭ | ೬ | | ೧೦ | ೬ |

೨೫. ಯಲ್ಲಮ್ಮನ ಜಾತ್ರೆಗೆ ಹೋದ ಒಂದು ಕುಟುಂಬಕ್ಕೆ ಚಕ್ಕಡಿಯ ಬಾಡಿಗೆಗೆ ೮ ರೂ. ೧೨ ಆ. ೬ ಪೈ; ಪೂಜೆಗೆ ೩ ರೂ. ೧೧ ಆ. ೯ ಪೈ. ಊಟಕ್ಕೆ ೧೭ ರೂ. ೧೩ ಆ. ೮ ಪೈ. ಹಾಗು ಆಟ ನೋಡಲಿಕ್ಕೆ ೫ ರೂ. ೯ ಆ. ೩ ಪೈ. ಖರ್ಚಾಯಿತು. ಒಟ್ಟು ಖರ್ಚು ತೆಗೆಯಿರಿ.

೨೬. ಕೂಸಿನ ಕಾಲಕಡಗಕ್ಕೆ ೩ ರೂ. ೧೧ ಆ. ೬ ಪೈ; ಬಿಂದಲಿಗೆ ೨೭ರೂ. ೮ ಆ. ೯ ಪೈ; ಉಡದಾರಕ್ಕೆ ೧೦೨ ರೂ. ೧೩ ಆ. ೯ ಪೈ ಖರ್ಚಾದರೆ ಎಲ್ಲ ಒಡವೆಗಳಿಗೂ ಕೂಡಿ ಎಷ್ಟು ಖರ್ಚಾಯಿತು ?

೨೭. ಒಂದು ಹೊಸ ಸಾಲೆಗಾಗಿ ಊರವರು ಮುಂದಿನ ಸಾಮಾನ ಕೊಟ್ಟರು. ಮೇಜು ೮ ರೂ. ೯ ಆ. ೬ ಪೈ, ಖುರ್ಚಿ ೫ ರೂ. ೬ ಆ. ೯ ಪೈ; ಸ್ಟೂಲು ೨ ರೂ. ೧೫ ಆ. ಊರವರಿಗೆ ಎಷ್ಟು ಖರ್ಚಾಯಿತು ?

೨೮. ಒಬ್ಬ ಅಂಗಡಿಕಾರನು ಸೋಮವಾರ ೧೫ ರೂ. ೧೨ ಆ. ಮಂಗಳವಾರ ೧೨ ರೂ. ೧೪ ಆ. ೬ ಪೈ. ಬುಧವಾರ ೨೫ ರೂ. ೪ ಆ. ೮ಪೈ, ಗುರುವಾರ ೫೬ ರೂ. ೩ ಆ. ೩ ಪೈ. ಶುಕ್ರವಾರ ೫ ರೂ. ೬ ಆ. ಶನಿವಾರ ೧೭ ರೂ. ೧೫ ಆ. ೯ ಪೈ. ಕೂಡಿಟ್ಟನು. ಅವನು ಆ ವಾರದಲ್ಲಿ ಕೂಡಿಟ್ಟ ಒಟ್ಟು ಹಣವೆಷ್ಟು ?

೨೯. ಒಬ್ಬನು ಮಗಳ ಮದುವೆಯಲ್ಲಿ ವರದಕ್ಷಿಣೆಗೆ ೨೫೦೦ ರೂ. ಊಟ ವಗೈರೆಯ ಬಗ್ಗೆ ೧೦೫೭ ರೂ. ೧೨ ಆ. ೯ ಪೈ; ಜವಳಿಯ ಬಗ್ಗೆ ೩೪೮ ರೂ. ೩ ಆ. ೬ ಪೈ. ಗಾಡಿಯ ಹಾಸಲಿಗೆ ೫೭ ರೂ. ೧೨ ಆ. ಖರ್ಚು ಮಾಡಿದನು. ಅವನಿಗೆ ಒಟ್ಟು ಎಷ್ಟು ಖರ್ಚು ಬಂತು ?

೩೦. ಒಬ್ಬನು ವಿಲಾಯತಿಯಿಂದ ಕಾಲಗಾಡಿ ತರಿಸಲು ಕೆಳಗೆ ತೋರಿಸಿದಂತೆ ಬೆಲೆ ಬಿತ್ತು. ಗಾಡಿ ೨ ಪೌ. ೧೩ ಶಿ. ೬ ಪೆ. ದೀಪ ೧೦ ಶಿ. ೯ ಪೆ. ಗಂಟೆ ೮ ಶಿ. ೧೨ ಪೆ; ಗಾಡಿ ಹಾಸಲಿನ ಬಗ್ಗೆ ೧ ಪೌ. ೩ ಶಿ. ೭ ಪೆ. ಒಟ್ಟು ಅವನು ಎಷ್ಟು ರಕಮು ಕಳಿಸಬೇಕಾಯಿತು ?

೩೧. ವಿಲಾಯತಿಯಿಂದ ಒಬ್ಬ ಅಂಗಡಿಕಾರನು ೧೩ ಪೌ. ೧೩ ಶಿ. ಸಬಕಾರ; ೨೭ ಪೌ. ೧೪ ಶಿ. ೬ ಪೆ. ಆಟಗಳು, ೩ ಪೌ. ೧೧ ಶಿ. ೫ಪೆ. ಕಾಲುಚೀಲ, ೧೦ ಪೌ. ೭ ಪೆ. ಕಶೀದೆಯ ಅರಿವೆ ತರಿಸಿದನು. ಅವನು ಒಟ್ಟು ಎಷ್ಟು ರಕಮಿನ ವ್ಯಾಪಾರ ಮಾಡಿದಂತಾಯಿತು ?

ಬೇರೀಜು ಮಾಡಿರಿ.

| | ರೂ. | ಆ. | ಪೈ. | | ರೂ. | ಆ. | ಪೈ. | | ರೂ. | ಆ. | ಪೈ. |
|---|---|---|---|---|---|---|---|---|---|---|---|
| ೩೨. | ೧೮ | ೩ | ೬ | ೩೩. | ೧೪ | ೬ | ೩ | ೩೪. | ೨೮ | ೫ | ೪ |
| | ೧೫ | ೮ | ೪ | | ೨೫ | ೭ | ೬ | | ೧೩ | ೧೪ | ೧೧ |
| | ೯ | ೧೨ | ೯ | | ೧೨ | ೧೩ | ೯ | | ೧೯ | ೯ | ೭ |
| | ೧೧ | ೫ | ೯ | | ೮ | ೧೦ | ೮ | | ೧೬ | ೧೫ | ೧೧ |
| ೩೫. | ೩೬ | ೧೨ | ೪ | ೩೬. | ೨೯ | ೧ | ೧೦ | ೩೭. | ೧೯ | ೨ | ೬ |
| | ೨೮ | ೮ | ೩ | | ೯ | ೧೦ | ೧೧ | | ೨೧ | ೧೩ | ೯ |
| | ೩೧ | ೧೦ | ೫ | | ೧೭ | ೩ | ೨ | | ೩೪ | ೯ | ೪ |
| | ೩೫ | ೧೩ | ೬ | | ೧೫ | ೧೪ | ೭ | | ೮ | ೫ | ೧೦ |
| ೩೮. | ೨೪ | ೬ | ೬ | ೩೯. | ೫೨ | ೪ | ೮ | ೪೦. | ೬೩ | ೨ | ೧ |
| | ೨೭ | ೧೩ | ೯ | | ೨೬ | ೦ | ೧೧ | | ೫೬ | ೮ | ೩ |
| | ೩೫ | ೧ | ೮ | | ೪೪ | ೯ | ೦ | | ೧೯ | ೧೧ | ೮ |
| | ೪ | ೧೫ | ೧೦ | | ೩೭ | ೧೧ | ೧೧ | | ೫೭ | ೧೪ | ೧೧ |

೪೧. ೩೨ಪೌ. ೧೩ಶಿ. ೩ಪೆ. ೧ ಫಾ.
೨೮ ,, ೧೦ ,, ೯ ,, ೨ ,,
೧೨ ,, ೧೬ ,, ೭ ,, ೨ ,,

೪೨. ೧೫೯ಪೌ. ೧೫ಶಿ. ೫ಪೆ. ೦ಫಾ
೫೭ ,, ೧೫ ,, ೭ ,, ೨ ,,
೪೮ ,, ೧೪ ,, ೯ ,, ೩ ,,

೪೩. ೬೮ಪೌ. ೧೧ಶಿ. ೧೦ಪೆ.
೭೩ ,, ೧೨ ,, ೧೧ ,,
೫೭ ,, ೧೧ ,, ೧೧ ,,

೪೪. ೨೫೮ಪೌ. ೨ಶಿ. ೫ಪೆ. ೩ಫಾ.
೧೦೯ ,, ೧೫ ,, ೭ ,, ೧ ,,
೬೬ ,, ೧೧ ,, ೧೦ ,, ೦ ,,

೪೫. ಒಂದು ವರ್ಷ ಮೊಸರಿನ ಬಗ್ಗೆ ೨ ರೂ. ೬ ಆ. ೩ ಪೈ, ಹಾಲಿನ ಬಗ್ಗೆ ೨೧ ರೂ. ೯ ಆ. ೬ ಪೈ ಖರ್ಚು ಬಂತು. ಇವೆರಡರ ಒಟ್ಟು ಖರ್ಚಿನಷ್ಟೇ ಬೆಣ್ಣೆಯ ಬಗ್ಗೆ ಖರ್ಚಾಗಿತ್ತು. ಆ ವರ್ಷ ಎಷ್ಟು ಹಣದ ಬೆಣ್ಣೆ ಕೊಂಡಿತ್ತು ?

೪೬. ಒಬ್ಬ ಒಕ್ಕಲಿಗನು ಕರೇಹೋರಿಯನ್ನು ೩೯ ರೂ. ೧೨ ಆ. ಗೆ, ಬಿಳೇದನ್ನು ಇದಕ್ಕಿಂತ ೭ ರೂ. ೧೩ ಆ. ಹೆಚ್ಚು ತಕ್ಕೊಂಡು, ಎಮ್ಮೆಯನ್ನು ಬಿಳೇಹೋರಿಯ ಬೆಲೆಗಿಂತ ೧೩ ರೂ. ೯ ಆ. ಹೆಚ್ಚು ತಕ್ಕೊಂಡು ಮಾರಿದನು. ಅವನಿಗೆ ಮಾರಾಟದಿಂದ ಒಟ್ಟು ಎಷ್ಟು ರೂ. ಆಯಿತು ?

೪೭. ಒಬ್ಬ ಅಂಗಡಿಕಾರನಲ್ಲಿರುವ ನಾಲ್ಕು ಸೀರೆಗಳ ಬೆಲೆಯನ್ನು ಅವನು ಮುಂದೆ ಕಾಣಿಸಿದಂತೆ ಹೇಳಿದನು. ೧ನೆಯ ಸೀರೆಗೆ ೨೭ರೂ. ೧೨ ಆ. ೬ಪೈ. ೨ನೆಯ ಸೀರೆಯ ಬೆಲೆ ಇದಕ್ಕಿಂತ ೨ರೂ. ೧೩ಆ. ೯ಪೈ. ಹೆಚ್ಚು; ೩ನೆಯ ಸೀರೆಯದು ೨ನೆಯದಕ್ಕಿಂತ ಅಷ್ಟೇ ರಕಮು ಹೆಚ್ಚು; ೪ನೆಯ ಸೀರೆಯ ಬೆಲೆಯು ೩ನೆಯದಕ್ಕಿಂತ ಅಷ್ಟೇ ರಕಮು ಹೆಚ್ಚು. ಆದರೆ ೩ನೆಯ ಸೀರೆಯ ಬೆಲೆ ಎಷ್ಟು? ನಾಲ್ಕೂ ಸೀರೆಗಳ ಒಟ್ಟು ಬೆಲೆ ಎಷ್ಟು?

೪೮. ಒಬ್ಬ ಅಂಗಡಿಕಾರನಿಗೆ ಸೋಮವಾರ ೧೨೫ ರೂ. ೧೩ ಆ. ೬ ಪೈ. ವ್ಯಾಪಾರವಾಯಿತು. ಮುಂದೆ ಶನಿವಾರದ ವರೆಗೆ ಪ್ರತಿದಿನ ೪ ರೂ. ೮ ಆ. ೯ ಪೈಯಂತೆ ಹಿಂದಿನ ದಿವಸಕ್ಕಿಂತ ಹೆಚ್ಚೆಚ್ಚು ವ್ಯಾಪಾರವಾಯಿತು. ಶನಿವಾರ ಎಷ್ಟು ರೂ.ಗಳ ವ್ಯಾಪಾರವಾಯಿತು? ಆ ವಾರದಲ್ಲಿ ಒಟ್ಟು ಎಷ್ಟು ರೂ. ಗಳ ವ್ಯಾಪಾರವಾಯಿತು?

## ವಿವಿಧ ಪರಿಮಾಣಗಳ ವಜಾಬಾಕಿ

ಲೆಕ್ಕಗಳಲ್ಲಿ ತೋರಿಸಿದಂತೆ ಕೊನೆಗೆ ಕೊಟ್ಟ ಪೈಗಳು ಉಳಿಯುವ ವರೆಗೆ ಕಳೆಯುತ್ತ ಹೋಗಿರಿ.

೧. ೩ ಆ., ೨ ಆ. ೧೦ ಪೈ., ೨ ಆ. ೮ ಪೈ, ಹೀಗೆ ೪ ಪೈ ವರೆಗೆ
೨. ೫ ಆ., ೪ ಆ. ೯ ಪೈ, ೪ ಆ. ೬ ಪೈ, ಹೀಗೆ ೬ ಪೈ ವರೆಗೆ
೩. ೬ ಆ. ೪ ಪೈ., ೬ ಆ., ೫ ಆ. ೮ ಪೈ, ಹೀಗೆ ೮ ಪೈ ವರೆಗೆ
೪. ೮ ಆ. ೪ ಪೈ., ೭ ಆ. ೧೧ ಪೈ, ೭ ಆ. ೬ ಪೈ, ಹೀಗೆ ೫ ಪೈ ವರೆಗೆ
೫. ೧೨ ಆ., ೧೧ ಆ. ೫ ಪೈ, ೧೦ ಆ. ೧೦ ಪೈ, ಹೀಗೆ ೪ ಪೈ ವರೆಗೆ
೬. ೧ ರೂ., ೧೫ ಆ. ೪ ಪೈ, ೧೪ ಆ. ೮ ಪೈ. ಹೀಗೆ ೮ ಪೈ ವರೆಗೆ

**ಮಾ. ಲೆಕ್ಕ:—೨೮.** ರಂಗನು ೫ ರೂ. ೧೪ ಆ. ೯ ಪೈ. ಒಯ್ದು ೩ರೂ. ೮ಆ. ೩ ಪೈಯ ಸಾಮಾನು ತಂದನು. ಅವನು ತಿರುಗಿ ತಂದ ರೊಕ್ಕವೆಷ್ಟು?

ಇಲ್ಲಿ ಉಳಿದ ಹಣ ತೆಗೆಯಬೇಕಾದ್ದರಿಂದ ವಜಾಬಾಕಿ.

| | | | |
|---|---|---|---|
| ೫ ರೂ. | ೧೪ ಆ. | ೯ ಪೈ. | ೩ ಪೈ. ಮತ್ತು ಆರು ಪೈ. ೯ ಪೈ. |
| ೩ ರೂ. | ೮ ಆ. | ೩ ಪೈ. | ೮ ಆ. ಮತ್ತು ಆರು ಆ. ೧೪ ಆ. |
| ೨ ರೂ. | ೬ ಆ. | ೬ ಪೈ. | ೩ ರೂ. ಮತ್ತು ಎರಡು ರೂ. ೫ರೂ |

## ಲೆಕ್ಕಗಳ ಗುಂಪು :— ೪೩ (ಬಾಯಿಲೆಕ್ಕ)

೧. ಗಂಗನಲ್ಲಿ ೪ ಆ. ೭ ಪೈ ಅವೆ. ೩ ಆ. ೪ ಪೈ ಕೊಟ್ಟು ಕಾಗದ ತಂದ ಬಳಿಕ ಅವನಲ್ಲಿ ಉಳಿದ ರೊಕ್ಕ ಎಷ್ಟು ?

೨. ರಾಮನ ಹತ್ತರ ೬ ಆ. ೮ ಪೈ. ಇವೆ. ಗೋಪೂನಲ್ಲಿ ಇದಕ್ಕಿಂತ ೨ ಆ. ೫ ಪೈ. ಕಡಿಮೆ ಇವೆ. ಆದರೆ ಗೋಪೂನ ಹತ್ತರ ಇರುವ ರೊಕ್ಕವೆಷ್ಟು?

೩. ಅ. ೮೬ ಚವಲಿ; ೮೬ ಪಾವಲಿ. ಬ. ೨೬೦ ಆ. ೨೬೦ ಅರ್ಧ ಆಣೆ. ಕ. ೫೦ ರೂ. ೧೫೦ ಅರ್ಧ ರೂ. ಇವುಗಳೊಳಗಿನ ಅಂತರವೆಷ್ಟು?

೪. ದೇಸಾಯರ ಊಟದ ಖರ್ಚು ತಿಂಗಳಿಗೆ ೨೨ ರೂ. ೮ ಆ. ೬ ಪೈ; ಹನುಮನದು ೮ ರೂ. ೬ ಆ. ಆದರೆ ದೇಸಾಯರ ಖರ್ಚು ಎಷ್ಟು ಹೆಚ್ಚು ?

೫. ಒಂದು ತೊಲೆ ಬಂಗಾರಕ್ಕೆ ೨೧ ರೂ. ೬ ಆ. ಬೆಲೆ. ನನ್ನಲ್ಲಿ ೧೮ ರೂ. ೪ ಆ. ಇವೆ. ೧ ತೊಲೆ ಬಂಗಾರ ಕೊಳ್ಳಲಿಕ್ಕೆ ಇನ್ನೆಷ್ಟು ಹಣ ಬೇಕು ?

## ಲೆಕ್ಕಗಳ ಗುಂಪು:— ೪೪

೧. ದುರ್ಗನ ಅಪ್ಪನು ಅವನಿಗೆ ೯ ಆ. ೬ ಪೈ ಕೊಟ್ಟನು. ಅವನು ೫ ಆ. ೪ ಪೈ ಕೊಟ್ಟು ಒಂದು ಪುಸ್ತಕ ಕೊಂಡರೆ ಅವನಲ್ಲಿ ಉಳಿದ ರೊಕ್ಕವೆಷ್ಟು ?

೨. ಕಲ್ಲನು ತನ್ನಲ್ಲಿದ್ದ ೮ ಆ. ೯ ಪೈಗಳಲ್ಲಿ ೬ ಆ. ೪ ಪೈ ಕಳಕೊಂಡನು. ಅವನ ಹತ್ತರ ಉಳಿಯಿತೆಷ್ಟು ?

೩. ಗಂಗವ್ವನು ಮಗನ ಕಡೆಗೆ ೧೪ ಆ. ೯ ಪೈ ಕೊಟ್ಟು ೯ ಆ. ೩ ಪೈಯ ಕನ್ನಡಿ, ೨ ಆ. ೩ ಪೈಯ ಕರೀ ಮಶೀ ತರಿಸಿದಳು. ಅವನು ತಿರುಗಿ ತಂದ ರೊಕ್ಕವೆಷ್ಟು ?

೪. ೧೨ ಆ. ೩ ಪೈಗಳಲ್ಲಿ ಪಾಟಿಗೆ ೮ ಆ. ೩ ಪೈ. ಟಾಕುಪೇನ್ಸಿಲಿಗೆ ೨ ಆ. ೮ ಪೈ ಖರ್ಚಾದ ಬಳಿಕ ಎಷ್ಟು ಉಳಿಯುವದು ?

೫. ಗೋವಿಂದನಲ್ಲಿ ೮ ಆಣೆ ೯ ಪೈ. ಇವೆ. ೧೧ ಆಣೆ ೩ ಪೈ. ಬೀಳುವ ಒಂದು ಪಾಟಿಯನ್ನು ಕೊಳ್ಳಲಿಕ್ಕೆ ಅವನಿಗೆ ಎಷ್ಟು ರೊಕ್ಕ ಕಡಿಮೆಯಾಗುವದು ?

೬. ಒಬ್ಬ ಹುಡುಗನು ೫ ಆ. ಒಯ್ದು ೩ ಆ. ೮ ಪೈಯ ಹಣ್ಣು ತಂದನು. ಇವನಲ್ಲಿ ಎಷ್ಟು ರೊಕ್ಕ ಉಳಿದಿರಬೇಕು ?

೭. ಮರಿಯಮ್ಮನು ೧೫ ಆ. ೬ ಪೈ ಒಯ್ದು ೫ ಆ. ೬ ಪೈಯ ಕಸೂತಿಯ ಅರಿವೆ. ೩ ಆ. ೩ ಪೈಯ ಲೋಕರಿ ಕೊಂಡಳು. ತಿರುಗಿ ಇವಳು ಎಷ್ಟು ರೊಕ್ಕ ತಂದಳು ?

೮. ೫ ಶಿ. ೬ ಪೆ. ಕೊಟ್ಟು ಕೊಂಡ ಪುಸ್ತಕವನ್ನು ೪ ಶಿ. ೯ ಪೆನಸಿಗೆ ಮಾರಿದರೆ ಎಷ್ಟು ಕಡಿಮೆ ಬೆಲೆಗೆ ಮಾರಿದಂತಾಯಿತು ?

೯. ರಾಮನು ೧೭ ಶಿ. ೧೦ ಪೆ. ಗೆ ಒಂದು ಗಡಿಯಾಲ ತರಿಸಿ ೧೮ ಶಿ. ೧೦ ಪೆ. ಗೆ ಗೋಪೂನಿಗೆ ಕೊಟ್ಟರೆ, ಅವನಿಗೆ ಉಳಿಯಿತೆಷ್ಟು ?

೧೦. ವಿದೇಶದಲ್ಲಿ ಒಬ್ಬ ಕೂಲಿಯವನು ದಿನಾಲು ೯ ಶಿ. ದುಡಿದು ೭ ಶಿ. ೫ ಪೆ. ಖರ್ಚು ಮಾಡಿದರೆ, ದಿನಾಲು ಅವನಲ್ಲಿ ಎಷ್ಟು ರೊಕ್ಕ ಉಳಿಯುವದು ?

ವಜಾಬಾಕಿ ಮಾಡಿರಿ.

| | ಆ. | ಪೈ. | | ಆ. | ಪೈ. | | ಆ. | ಪೈ | | ಆ. | ಪೈ |
|---|---|---|---|---|---|---|---|---|---|---|---|
| ೧೧. | ೯ | ೧ | ೧೨. | ೭ | ೨ | ೧೩. | ೮ | ೩ | ೧೪. | ೧೧ | ೩ |
| | ೭ | ೮ | | ೪ | ೯ | | ೫ | ೬ | | ೮ | ೧೧ |
| ೧೫. | ೧೫ | ೩ | ೧೬. | ೧೩ | ೬ | ೧೭. | ೭ | ೫ | ೧೮. | ೭ | ೦ |
| | ೧೨ | ೯ | | ೧೦ | ೮ | | ೫ | ೬ | | ೫ | ೭ |

| | ಶಿ. | ಪೆ. | | ಶಿ. | ಪೆ. | | ಶಿ. | ಪೆ. | | ಶಿ. | ಪೆ. |
|---|---|---|---|---|---|---|---|---|---|---|---|
| ೧೯. | ೧೧ | ೫ | ೨೦. | ೧೩ | ೨ | ೨೧. | ೧೭ | ೭ | ೨೨. | ೧೧ | ೧೦ |
| | ೧೩ | ೭ | | ೯ | ೮ | | ೧೪ | ೯ | | ೩ | ೩ |

೨೩. ೫ ಆ. ೨ ಪೈ—೪ ಆ. ೪ ಪೈ. ೨೪. ೯ ಆ. ೩ ಪೈ.—೬ ಆ. ೧೦ಪೈ.
೨೫. ೮ ಆ. ೬ ಪೈ—೫ ಆ. ೯ ಪೈ. ೨೬. ೧೪ ಆ.೨ ಪೈ.—೯ ಆ. ೮ಪೈ.
೨೭. ೧೪ಶಿ. ೧ ಪೆ—೭ ಶಿ. ೧೦ ಪೆ. ೨೮. ೫ ಶಿ. ೩ಫಾ.—೮ ಪೆ. ೧ಫಾ.
೨೯. ೯ ಶಿ. ೬ ಪೆ. ೧ ಫಾ—೬ ಶಿ. ೩ ಫಾ. ೩೦. ೧೫ ಶಿ—೧೧ಪೆ. ೧ಫಾ.

**ಮಾ. ಲೆಕ್ಕ:—೨೯.** ಒಬ್ಬನು ವರ್ಷದಲ್ಲಿ ೨೫೮ ರೂ. ೮ ಆಣೆ ೪ ಪೈ ಗಳಿಸುವನು. ಹಾಗು ೧೯೬ ರೂ. ೧೩ ಆ. ೬ ಪೈ. ಖರ್ಚು ಮಾಡುವನು. ಆದರೆ ಅವನು ವರ್ಷದ ಕೊನೆಗೆ ಕೂಡಿಡುವ ಹಣವೆಷ್ಟು ?

ಖರ್ಚು ಮಾಡಿ ಉಳಿಸಿದ ಹಣವೇ ಕೂಡಿಟ್ಟ ಹಣ; ಆದ್ದರಿಂದ ವಜಾಬಾಕಿ, ಕಳೆಯಿಸಿಕೊಳ್ಳುವ ರಕಮಿನಲ್ಲಿ ಆ. ಹಾಗು ಪೈ. ಇವು ಕಳೆಯುವ ಸಂಖ್ಯೆಯಲ್ಲಿರುವ ಆ. ಹಾಗು ಪೈಗಿಂತ ಸಣ್ಣವಿರುವವು. ಆದ್ದರಿಂದ **೨೫೮** ರೂ. ಗಳಲ್ಲಿಯೂ ೧ ರೂ. ಮುರಿಸಿ **೧೫** ಆ. **೧೨** ಪೈ ಮಾಡಿಕೊಂಡಾಗ **೨೫೮** ರೂ. **೮** ಆ. **೪** ಪೈ = **೨೫೭** ರೂ. **೨೩** ಆ. **೧೬** ಪೈ ಆಗುವದು.

| | |
|---|---|
| **೨೫೭** ರೂ. **೨೩** ಆ. **೧೬** ಪೈ | **೧೬** ಪೈ − **೬** ಪೈ = **೧೦** ಪೈ |
| **೧೯೬** ರೂ. **೧೩** ಆ. **೬** ಪೈ | **೨೩** ಆ. − **೧೩** ಆ. = **೧೦** ಆಣೆ |
| **೬೧** ರೂ. **೧೦** ಆ. **೧೦** ಪೈ | ಇವುಗಳಂತೆ ರೂ. ಗಳ ವಜಾಬಾಕಿ. |

ತುಸು ರೂಢಿಯಾದ ಬಳಿಕ ಲೆಕ್ಕವನ್ನು ಕೆಳಗೆ ತೋರಿಸಿದಂತೆ ಇಟ್ಟುಕೊಂಡು ಮಾಡುವರು.

| | |
|---|---|
| | ಅನ್ನುವದು:— |
| **೨೫೮** ರೂ. **೮** ಆ. **೪** ಪೈ. | **೬** ಪೈ. ಮತ್ತು **ಹತ್ತು** ಪೈ. **೧೬** ಪೈ. |
| **೧೯೬** ರೂ. **೧೩** ಆ. **೬** ಪೈ. | **೪** ಪೈ. ಕೈಲಿ ೧ ಆಣೆ. |
| **೬೧** ರೂ. **೧೦** ಆ. **೧೦** ಪೈ, | ೧ ಆ. **೧೪** ಆ. ಮತ್ತು **ಹತ್ತು** ಆ. |
| | **೨೪** ಆ. **೮** ಆಣೆ. ಕೈಲಿ ೧ ರೂ. |

### ಲೆಕ್ಕಗಳ ಗುಂಪು:—೪೫

೧. ಒಂದು ಖುರ್ಚಿ ಹಾಗು ಒಂದು ಮೇಜಿನ ಬೆಲೆಯು **೨೭** ರೂ. **೧೨** ಆ. **೯** ಪೈ. ಖುರ್ಚಿಯ ಬೆಲೆ ಮಾತ್ರ **೫**ರೂ. **೮**ಆ. **೬**ಪೈ ಆದರೆ ಮೇಜಿನ ಬೆಲೆ ಏನು ?

೨. **೯೬** ರೂ. **೧೩**ಆ. **೩**ಪೈ ಹಾಗು **೨೦೦**ರೂ, ಇವುಗಳ ಅಂತರವೆಷ್ಟು?

೩. ಎರಡು ಚೀಲಗಳಲ್ಲಿ ಒಟ್ಟಿಗೆ **೨೩೭** ರೂ. **೩** ಆ. **೪** ಪೈ. ಅವೆ. ಒಂದರಲ್ಲಿ **೧೪೮** ರೂ. **೧೪** ಆ. **೬** ಪೈ ಇದ್ದರೆ **೨**ನೆಯ ಚೀಲದಲ್ಲಿ ಎಷ್ಟಿರಬೇಕು ?

೪. **೫೯೨** ರೂ. **೧೨** ಆ. **೩**ಪೈಗೆ ಎಷ್ಟು ಕೂಡಿಸಿದರೆ **೮೩೯** ರೂ. **೮** ಆ. **೯** ಪೈ. ಆಗುವದು ?

೫. ಯಾವ ರಕಮಿನಲ್ಲಿ **೮೩೭** ರೂ. **೧೫** ಆ. **೬** ಪೈ. ಕಳೆದರೆ **೨೪೮** ರೂ. **೪** ಆ. **೫** ಪೈ. ಉಳಿಯುವವು ?

೬. **೧೯೨** ಪೌ. ೧೨ ಶಿ. **೭** ಪೆ; ಹಾಗೂ **೯೬** ಪೌ. ೧೦ಶಿ. **೯**ಪೆ. ಇವುಗಳಲ್ಲಿ ಅಂತರವೆಷ್ಟು ?

೭. **೧೭೦** ಪೌ. **೧೭** ಶಿ. **೭** ಪೆ; ಹಾಗೂ **೧೫೯** ಪೌ. **೧೩** ಶಿ. **೮** ಪೆ. ಇವುಗಳ ಅಂತರವೆಷ್ಟು ?

೮. ಅರಿವೆಯ ಅಂಗಡಿಯವನಿಗೆ ಕೊಡಬೇಕಾದ **೫೭** ರೂ. **೫** ಆಣೆಯೊಳಗೆ **೪೯** ರೂ **೧೨** ಆ. **೯** ಪೈ ಕೊಟ್ಟ ಬಳಿಕ ಎಷ್ಟು ಕೊಡಬೇಕಾಗುವದು ?

೯. ಒಬ್ಬನು ಸಾವಕಾರನಿಗೆ **೧೦೮೪** ರೂ. **೬** ಆ. **೩** ಪೈ.ಕೊಡಬೇಕಾಗುವದು. ಅದರಲ್ಲಿ **೯೬** ರೂ. **೧೩** ಆ. **೮**ಪೈ. ಅವರು ಸೂಟಬಿಟ್ಟರೆ, ಸಾಲ ತೀರಿಸಲಿಕ್ಕೆ ಎಷ್ಟು ಕೊಡಬೇಕಾಯಿತು ?

೧೦. ಒಂದು ಮುನಸಿಪಾಲ್ಟಿಗೆ ಕನ್ನಡ ಸಾಲೆಗಳ ಬಗ್ಗೆ **೭೫೬೩** ರೂ. **೮**ಆ. **೬** ಪೈ. ಖರ್ಚು ಬರುವದು. ಇದರಲ್ಲಿ ಸರಕಾರದಿಂದ **೪೮೭೨** ರೂ. **೧೨** ಆ. **೮** ಪೈ. ಬಂದರೆ, ಮುನಸಿಪಾಲಿಟಿಯವರು ಎಷ್ಟು ಖರ್ಚು ಮಾಡಿದಂತಾಯಿತು ?

೧೧. ಒಬ್ಬ ರೈತನಲ್ಲಿ **೧೦೫** ರೂ. **೧೨** ಆ. **೯** ಪೈ. ಹೆಚ್ಚು ಇದ್ದರೆ ಅವನು **೫೧೩** ರೂ. **೮** ಆ. **೬** ಪೈ. ಬೀಳುವ ಒಂದು ಗೋದಿಯ ಪೈರನ್ನು ಗುತ್ತಿಗೆ ಹಿಡಿಯುತ್ತಿದ್ದನು. ಅವನ ಹತ್ತರ ಇದ್ದ ಹಣವು ಎಷ್ಟು ?

ವಜಾಬಾಕಿ ಮಾಡಿರಿ.

| | ರೂ. | ಆ. | ಪೈ. | | ರೂ. | ಆ. | ಪೈ. | | ರೂ. | ಆ. | ಪೈ. |
|---|---|---|---|---|---|---|---|---|---|---|---|
| ೧೨. | **೧೫೧** | **೪** | **೫** | ೧೩. | **೨೩೮** | **೬** | **೯** | ೧೪. | **೨೦೮** | **೧** | **೯** |
| | **೧೨೮** | **೮** | **೯** | | **೧೯೬** | **೯** | **೫** | | **೧೩೭** | **೧೫** | **೬** |

| | ರೂ. | ಆ. | ಪೈ. | | ರೂ. | ಆ. | ಪೈ. | | ರೂ. | ಆ. | ಪೈ. |
|---|---|---|---|---|---|---|---|---|---|---|---|
| ೧೫. | **೩೧೯** | **೧೨** | **೨** | ೧೬. | **೪೧೪** | **೩** | **೬** | ೧೭. | **೮೦೫** | **೪** | **೩** |
| | **೨೪೯** | **೧೦** | **೯** | | **೩೧೯** | **೯** | **೧೦** | | **೭೧೮** | **೧೪** | **೬** |

| | ರೂ. ಆ. ಪೈ. | | ರೂ. ಆ. ಪೈ. | | ರೂ. ಆ. ಪೈ. |
|---|---|---|---|---|---|
| ೧೮. | ೧೦೦೦ ೦ ೦ | ೧೯. | ೧೦೧೦ ೧ ೦ | ೨೦. | ೭೫೦ ೦ ೩ |
| | ೯೩೬ ೧೨ ೩ | | ೯೧೦ ೦ ೧೧ | | ೬೫೦ ೮ ೭ |

| | ಪೌ. ಶಿ. ಪೆ. ಫಾ. | | ಪೌ. ಶಿ. ಪೆ. ಫಾ. | | ಪೌ. ಶಿ. ಪೆ. ಫಾ. |
|---|---|---|---|---|---|
| ೨೧. | ೮೨ ೭ ೫ ೧ | ೨೨. | ೭೦ ೭ ೭ ೩ | ೨೩. | ೧೦೦ ೧೦ ೫ ೨ |
| | ೭೪ ೧೦ ೧೦ ೩ | | ೩೮ ೧೨ ೦ ೧೦ | | ೯೮ ೧೨ ೧೦ ೨ |

ಮುಂದಿನ ಬೇರಿಜಿನ ಲೆಕ್ಕಗಳಲ್ಲಿ ಅಳಸಿಹೋದ ಅಂಕೆಗಳನ್ನು ತುಂಬಿರಿ.

| | ರೂ. ಆ. ಪೈ. | | ರೂ. ಆ. ಪೈ. | | ರೂ. ಆ. ಪೈ. |
|---|---|---|---|---|---|
| ೨೪. | ೩೬೦ ೧೧ ೮ | ೨೫. | ೯೫೭ ೩ ೧ | ೨೬. | ೪೦೭ ೪ ೪ |
| | . . . . . . | | . . . . . | | . . . . . |
| | ೩೮೦ ೧೫ ೦ | | ೨೭೫೨ ೧೫ ೦ | | ೧೫೦೧ ೨ ೯ |

೨೭. ೧೮೦ ಪೌ. ೩ ಶಿ. ೬ ಪೆ.—೮೦ ಪೌ. ೧೨ ಶಿ. ೬ ಪೆ. = ಎಷ್ಟು ?

**ಮಾ. ಲೆಕ್ಕ:—೩೦.** ಒಬ್ಬ ಮನುಷ್ಯನ ಒಂದು ವರ್ಷದ ಉತ್ಪನ್ನವು ೧೨೫೮ ರೂ. ೧೨ ಆ. ೬ ಪೈ. ಇದೆ. ಅವನು ಊಟದ ಖರ್ಚಿಗಾಗಿ ೭೩೫ ರೂ. ೪ ಆ. ೬ ಪೈ. ಬಟ್ಟೆ ಮತ್ತು ಕಿರುಕಳ ಖರ್ಚಿಗಾಗಿ ೨೬೧ ರೂ. ೬ ಆ. ೩ ಪೈ. ಉಪಯೋಗಿಸಿಕೊಂಡನು. ವರ್ಷದ ಕೊನೆಗೆ ಅವನು ಎಷ್ಟು ಹಣ ಉಳಿಸಿದನು ?

ಇಲ್ಲಿ ಊಟ, ಬಟ್ಟೆ ಹಾಗು ಕಿರುಕಳ ಖರ್ಚಿಗಾಗಿ ಉಪಯೋಗಿಸಿಕೊಂಡ ಹಣವನ್ನು ಮೊದಲು ಕೂಡಿಸಿಕೊಳ್ಳಬೇಕು. ಬಳಿಕ ಅವನ ಉತ್ಪನ್ನದ ಹಣದಲ್ಲಿ ವಜಾಬಾಕಿ ಮಾಡಬೇಕು.

ಊಟದ ಖರ್ಚು ೭೩೫ ರೂ. ೪ ಆ. ೬ ಪೈ.
ಬಟ್ಟೆ ಹಾಗು ಕಿರಕಳ ಖರ್ಚು + ೨೬೧ ರೂ. ೬ ಆ. ೩ ಪೈ.
೯೯೬ ರೂ. ೧೦ ಆ. ೯ ಪೈ.

ಉ. ಹ. ೧೨೫೮ ರೂ. ೧೨ ಆ. ೬ ಪೈ.
ಖ. ಹ. ೯೯೬ ರೂ. ೧೦ ಆ. ೯ ಪೈ.
೨೬೨ ರೂ. ೧ ಆ. ೯ ಪೈ.

ಅನ್ನುವದು:—
೯ ಪೈ. ಮತ್ತು ಒಂಬತ್ತು ಪೈ.
೧೮ ಪೈ. ೧ ಆ. ೬ ಪೈ. ೬ ಪೈ.
ಕೈಲಿ ೧ ಆ. ೧ಆ. ೧೧ಆ. ಮತ್ತು
ಒಂದು ಆ. ೧೨ ಆ.

## ಲೆಕ್ಕಗಳ ಗುಂಪು:— ೪೬.( ಬಾಯಿಲೆಕ್ಕ )

೧. ೫ ರೂ. ಯ ನೋಟು ಮುರಿಸಿ ೧ ರೂ. ೧೨ ಆ. ವರ್ತಮಾನ ಪತ್ರದ ವರ್ಗಣಿ, ೨ ರೂಪಾಯಿ ೮ ಆಣೆ ಸಾಲಿಯ ಫೀ ಕೊಟ್ಟರೆ ಎಷ್ಟು ಉಳಿಯುವದು ?

೨. ೨ ರೂ. ಗಳಲ್ಲಿ ಹಾಲಿಗೆ ೧೨ ಆ ೬. ಪೈ, ಸಕ್ಕರೆಗೆ ೮ ಆ. ೯ ಪೈ. ಕೊಟ್ಟು ತಿರುಗಿ ಮನೆಗೆ ಎಷ್ಟು ರೊಕ್ಕ ತರುವನು ?

೩. ಪೇಟೆಗೆ ೩ ರೂ. ಒಯ್ದು ೪ ಆ. ಕಾಯಿಪಲ್ಲೆ, ೧ ರೂ. ೭ ಆಣೆ ಸಕ್ಕರೆ, ೫ ಆ. ಪೇಡೆ ತಂದರೆ ರೊಕ್ಕ ಎಷ್ಟು ಉಳಿಯುವದು ?

೪. ರಾಮನು ಅಪ್ಪನಿಂದ ೧೦ ರೂ. ಇಸಕೊಂಡು, ೨ ರೂ. ಬೆಣ್ಣೆಗೆ ಕೊಟ್ಟು ಉಳಿದದ್ದರಲ್ಲಿ ೭ ರೂ. ೬ ಪೈಯ ಕೋಟಿನ ಅರಿವೆ ತಂದನು. ಮನೆಗೆ ಎಷ್ಟು ರೊಕ್ಕ ತಂದನು ?

## ಲೆಕ್ಕಗಳ ಗುಂಪು:— ೪೭.

೧. ಒಬ್ಬ ನೌಕರನಿಗೆ ೨೭೩ ರೂ. ೧೨ ಆ. ಪಗಾರ ಬಂತು. ಅವನು ಬ್ಯಾಂಕಿನ ಹಪ್ತೆ ೩೨ರೂ. ೧೪ಆ. ೬ಪೈ. ಕೊಟ್ಟನು. ೨೫ರೂ. ೧೪ಆ. ಕೊಟ್ಟು ಒಂದು ಸೀರೆಕೊಂಡನು. ೧೫೦ ರೂ. ೧೦ಆ. ೯ಪೈ. ಮನೆಗೆ ಖರ್ಚಾಯಿತು. ತಿಂಗಳ ಕೊನೆಗೆ ಅವನಲ್ಲಿ ಉಳಿದ ಹಣವೆಷ್ಟು ?

೨. ಒಬ್ಬ ಸಾವುಕಾರನ ಒಟ್ಟು ಉತ್ಪನ್ನವು ೪೮೪೫ ರೂ. ೬ ಆ. ೮ ಪೈ. ಅದೆ. ಅದರಲ್ಲಿ ಹೊಲದಿಂದ ೨೫೩೦ ರೂ. ೧೨ ಆ., ಬಡ್ಡಿಯಿಂದ ೧೮೨೪ ರೂ. ೧೦ ಆ. ೮ ಪೈ. ಬಂದರೆ, ಉಳಿದ ಬಾಬುಗಳಿಂದ ಎಷ್ಟು ಹಣ ಬರುವದು ?

೩. ಹುಡುಗರು ಆಟವಾಡಿ ೬೫ ರೂ. ೪ ಆ. ೩ ಪೈ. ಕೂಡಿಸಿದರು. ಅದರಲ್ಲಿ ೮ ರೂ. ೧೨ ಆ. ೬ ಪೈಯು ಪಾಟಿ, ೧೫ ರೂ. ೮ ಆ. ೯ ಪೈಯು ಪುಸ್ತಕ, ೩ ರೂ. ೬ ಆ. ೪ ಪೈಯು ಪೇನ್ಸಿಲು, ೨೫ ರೂ. ೧೪ ಆ. ೮ ಪೈಯು ಟೊಪ್ಪಿಗೆ ಕೊಂಡು ಬಡ ಹುಡುಗರಿಗೆ ಕೊಟ್ಟರೆ, ಮಿಕ್ಕ ರೊಕ್ಕವೆಷ್ಟು ?

೪. ೩ನೆಯ ಇ॥ ಯ ಸ್ಕೌಟ ಹುಡುಗರು ಕ್ಯಾಂಪಿನ ಖರ್ಚಿಗಾಗಿ ಒಟ್ಟಿಗೆ ೮೮ ರೂ. ೩ ಆ. ೬ ಪೈ. ವರ್ಗಣಿ ಕೂಡಿಸಿದರು. ಅವರು ರೇಲ

ಹಾಸಲಿಗಾಗಿ ೧೫ ರೂ. ೮ ಆ. ೬ ಪೈ, ಸಾಮಾನುಗಳಿಗೆ ೫ ರೂ. ೧೨ ಆ. ೯ ಪೈ, ಊಟಕ್ಕೆ ೫೬ ರೂ. ೪ ಆ. ೮ ಪೈ, ಇತರ ಖರ್ಚಿನ ಬಗ್ಗೆ ೮ ರೂ. ೧೪ ಆ. ೬ ಪೈ ವೆಚ್ಚಮಾಡಿದರು. ಒಟ್ಟು ವರ್ಗಣಿಯ ಹಣದಲ್ಲಿ ಎಷ್ಟು ಉಳಿಯಿತು ?

೫. ಒಬ್ಬ ಒಕ್ಕಲಿಗನಿಗೆ ಹತ್ತಿ ಮಾರಿದ್ದರಿಂದ ೫೩೮ ರೂ. ೧೨ ಆ. ೬ ಪೈ. ಬಂತು. ಅದನ್ನು ಅವನು ಮುಂದೆ ಕಾಣಿಸಿದಂತೆ ಖರ್ಚುಮಾಡಿದನು.

| | ರೂ. | ಆ. | ಪೈ. |
|---|---|---|---|
| ೨ ಸೀರೆ | ೨೮ | ೫ | ೬ |
| ೫ ತೊಲೆ ಬಂಗಾರ | ೧೧೨ | ೧೩ | ೬ |
| ೨ ಹೇರು ಬೆಲ್ಲ | ೩೬ | ೧೨ | ೬ |
| ೩ ಧೋತರಜೋಡು | ೧೨ | ೧೫ | ೬ |

| | ರೂ. | ಆ. | ಪೈ. |
|---|---|---|---|
| ೧ ಜೋಡು ಎತ್ತು | ೨೫೦ | ೦ | ೦ |
| ೨ ಕಂಬಳಿ | ೬ | ೮ | ೬ |
| ದೇವರಿಗೆ ಕಾಯಿಕಪ್ಪುರ | ೦ | ೪ | ೯ |

ಅವನಲ್ಲಿ ಉಳಿದ ಹಣವೆಷ್ಟು ?

೬. ಒಬ್ಬನು ವಿಲಾಯತಿಗೆ ೧೦೦೦ ಪೌ. ಕಳಿಸಿದನು. ಅವನಿಗೆ ೩ ಪಾರ್ಸಲು ಬಂದವು. ೧ನೆಯುದರ ಬೆಲೆ ೨೪೮ ಪೌ. ೧೩ ಶಿ. ೬ ಪೆ. ೨ನೆಯುದರ ಬೆಲೆ ೪೨೭ ಪೌ. ೧೧ ಶಿ. ೯ ಪೆ. ಆದರೆ ೩ನೆಯುದರ ಬೆಲೆ ಎಷ್ಟಿರಬೇಕು ?

೭. ೪ ಕಂತುಗಳಲ್ಲಿ ಒಬ್ಬನು ಒಂದು ಮೋಟಾರಗಾಡಿಯ ಬೆಲೆ ಕಳಿಸುವದಿತ್ತು. ೨೫ ಪೌ. ೧೦ ಶಿ. ನಂತೆ ಎರಡು ಕಂತು ೭೫ ಪೌ. ೮ ಶಿ. ನ ಒಂದು ಕಂತು ಕೊಟ್ಟ ಬಳಿಕ ೪ನೇ ಕಂತಿಗೆ ಎಷ್ಟು ಕಳಿಸಿದರೆ ಕಂಪನಿಯವರಿಗೆ ೨೦೦ ಪೌ. ಮುಟ್ಟುವವು ?

ಕೆಳಗಿನ ಲೆಕ್ಕ ಮಾಡಿರಿ.

೮. ೧೫೬ ರೂ. ೧೩ ಆ. ೭ ಪೈ.
+೧೧೮ ರೂ. ೯ ಆ. ೮ ಪೈ.
−೨೦೭ ರೂ. ೧೨ ಆ. ೧೧ ಪೈ.

೯. ೨೧೮ ರೂ. ೭ ಆ. ೬ ಪೈ.
+ ೫೭ ರೂ. ೧೪ ಆ. ೬ ಪೈ.
− ೧೯೬ ರೂ. ೧೩ ಆ. ೧೦ ಪೈ.

೧೦. ೩೫೬ ಪೌ. ೧೨ ಶಿ. ೮ ಪೆ.
+ ೬೮ ಪೌ. ೮ ಶಿ. ೧ ಪೆ.
− ೪೦೮ ಪೌ. ೧೧ ಶಿ. ೬ ಪೆ.

೧೧. ೫೦೩ ಪೌ. ೧೫ ಶಿ. ೫ ಪೆ.
−೩೧೦ ಪೌ. ೧೨ ಶಿ. ೬ ಪೆ.
+೧೧೫ ಪೌ. ೬ ಶಿ. ೩ ಪೆ.

# ವಿವಿಧ ಪರಿಮಾಣಗಳ ಗುಣಾಕಾರ

**ಮಾ. ಲೆಕ್ಕ** :—**೩೧.** ಒಬ್ಬ ಕೂಲಿಕಾರನು ವಾರಕ್ಕೆ **೩**ರೂ. **೧೦ಆ. ೬** ಪೈಯಂತೆ **೫** ವಾರಗಳಲ್ಲಿ ಎಷ್ಟು ಗಳಿಸುವನು ?
ಒಂದು ವಾರದ ಗಳಿಕೆಯ **೫** ಪಟ್ಟು **೫** ವಾರದ ಗಳಿಕೆಯು. ಆದ್ದರಿಂದ ಗುಣಾಕಾರ.

| | |
|---|---|
| **೩** ರೂ. **೧೦** ಆ. **೬** ಪೈ<br>× **೫**<br>**೧೮** ರೂ. **೪** ಆ. **೬** ಪೈ | **೫,೬ಲೆ,೩೦**ಪೈ=**೨**ಆ.**೬**ಪೈ, ಆರು ಪೈ. ಕೈಲಿ **೨**ಆ.<br>**೫, ೧೦**ಲೆ, **೫೦** ಆ. **೫೨** ಆ. = **೩**ರೂ. **೪**ಆ.<br>**ನಾಲ್ಕು** ಆಣೆ ಕೈಲಿ **೩** ರೂ.<br>**೫**, **೩** ಲೆ, **೧೫** ರೂ. **ಹದಿನೆಂಟು** ರೂ. |

**ಮಾ. ಲೆಕ್ಕ**:–**೩೨.** ಒಂದು ಮೇಜಿನ ಬೆಲೆ **೨೪**ರೂ. **೧೨**ಆ. **೬**ಪೈ. ನಾವು **೨೩೭** ಮೇಜು ಮಾಡಿಸಿದರೆ ಎಷ್ಟು ಹಣ ಕೊಡಬೇಕಾಗುವದು ?

ಒಂದು ಮೇಜಿನ ಬೆಲೆಯ **೨೩೭** ಪಟ್ಟು **೨೩೭** ಮೇಜಿನ ಬೆಲೆ. ಆದ್ದರಿಂದ ಗುಣಾಕಾರ.

೧ ನೆಯ ರೀತಿ:—

| ರೂ. | ಆ. | ಪೈ. |
|---|---|---|
| **೨೪** ರೂ. | **೧೨** ಆ. | **೬** ಪೈ. |
| | × **೨೩೭** | |
| **೫೮೭೩** | **೨** | **೬** ಉತ್ತರ. |
| **೧೮೫** | **೧೧೮** | **೧೪೨೨** |
| **೪೭೪೦** | **೨೩೭೦** | **೧೧೮** |
| **೯೪೮** | **೪೭೪** | |
| **೫೮೭೩** | **೨೯೬೨** | |
| | **೧೮೫** | |

ರೂ. ಆ. ಪೈಗಳ ಅಂಕೆಗಳು ಒಂದರಲ್ಲಿ ಒಂದು ಕೂಡದಂತೆ ದೂರ ದೂರ ಇಟ್ಟು ಕೊಳ್ಳುವ ರೂಢಿ ಮಾಡಬೇಕು.

೨ ನೆಯ ರೀತಿ:—

**೨೩೭**
**೬**
**೧೨** | **೧೪೨೨** ಪೈ.
**೧೧೮** ಆ. **೬** ಪೈ.
**೨೮೪೪** ಆ.
**೧೬** | **೨೯೬೨** ಆ.
**೧೮೫** ರೂ. **೨** ಆ.
**೪೭೪೦** ರೂ.
**೯೪೮** ರೂ.
**೫೮೭೩** ರೂ. **೨** ಆ. **೬**ಪೈ.
ಉತ್ತರ.

## ಲೆಕ್ಕಗಳ ಗುಂಪು:— ೪೮ (ಬಾಯಿಲೆಕ್ಕ)

೧. ೧ ಸೇರು ಬೆಣ್ಣೆಗೆ ೪ ಆ. ೬ ಪೈ. ಆದರೆ ಅ. ೩ ಸೇ. ಬ. ೫ ಸೇ. ಕ. ೮ ಸೇ. ಡ. ೧ ಧಡೆ, ಬೆಣ್ಣೆಯ ಬೆಲೆ ಎಷ್ಟಾಗುವದು ?

೨. ೧ ಗುಂಜಿ ತೂಕ ಬಂಗಾರದ ಗುಂಡಿಗೆ ೫ ಆ. ೩ ಪೈ. ಆದರೆ ಅ. ೪ ಬ. ೬, ಕ. ೯, ಡ. ೧೨ ಗುಂಡಿಗಳಿಗೆ ಎಷ್ಟು ಬೀಳುವದು ?

೩. ೧ ಸೇ. ಸಕ್ಕರೆಗೆ ೨ ಆ. ೬ ಪೈ. ಆದರೆ ಅ. ೫ ಸೇ. ಬ. ೭ ಸೇ. ಕ. ೯ ಸೇ. ಡ. ೧ ಧಡೆ ಸಕ್ಕರೆಗೆಷ್ಟು ?

೪. ೧ ಯಾ. ಅರಿವೆಗೆ ೬ ಆ. ೬ ಪೈ. ಆದರೆ ಅ. ೫ ಯಾ. ಬ. ೮ಯಾ. ಕ. ೧೨ ಯಾ ಡ. ೨೪ ಯಾ. ಅರಿವೆಗೆಷ್ಟು ?

೫. ಒಂದು ಟೊಪ್ಪಿಗೆಗೆ ೧ ರೂ. ೪ ಆ. ಆದರೆ ಅ. ೫, ಬ. ೧೨, ಕ. ೨೦ ಹಾಗು ಡ. ೨೪ ಟೊಪ್ಪಿಗೆಗಳ ಬೆಲೆ ಏನು ?

೬. ಒಂದು ಚೀಲ ಜೋಳಕ್ಕೆ ೮ ರೂ. ೬ ಆ. ಆದರೆ ೫ ಚೀಲಗಳಿಗೆಷ್ಟು?

೭. ಒಂದು ಖುರ್ಚಿಗೆ ೩ರೂ. ೧೩ಆ. ಅ ೮ ಖುರ್ಚಿಗೆ? ಬ. ಡಝನ್ ಖುರ್ಚಿಗೆ ?

೮. ಆಳಿನ ಒಂದು ವಾರದ ಕೂಲಿ ೨ ರೂ. ೭ ಆ. ಆದರೆ ೭ ವಾರದ ಕೂಲಿ ಎಷ್ಟು ?

೯. ೨೧ ರೂ. ೧೦ ಆ. ಗೆ ೧ ತೊ. ಬಂಗಾರದಂತೆ ೧೦ ತೊ. ಗೆ ಏನು ಬೀಳುವದು ?

೧೦. ಒಂದು ಗಡಿಯಾರಕ್ಕೆ ೧೦ ಶಿ. ೬ ಪೆ. ಆದರೆ ೫, ೧೨, ೧೬ ಗಡಿಯಾರಗಳ ಬೆಲೆ ಏನು ?

೧೧. ಒಂದು ಪುಸ್ತಕಕ್ಕೆ ೭ ಶಿ. ೭ ಪೆ. ಆದರೆ ೮, ೧೨, ೧೫ ಪುಸ್ತಕಗಳ ಬೆಲೆ ಎಷ್ಟು ?

೧೨. ೩ ಪೌ. ೩ ಶಿ. ಗೆ ಒಂದು ಕಾಲಗಾಡಿಯಂತೆ ೧೭ ಕಾಲಗಾಡಿಗಳ ಬೆಲೆ ಏನು ?

## ಲೆಕ್ಕಗಳ ಗುಂಪು:—೪೯.

೧. ಒಂದು ಹೊಲದಲ್ಲಿ ೧೨ ದಿವಸ ಗಳೇದ. ಕೆಲಸ ನಡೆಯಿತು. ದಿನಾಲು ಗೆ ೧ ೮.ಆ ೬ಪೈ. ಖರ್ಚು ಬಂತು. ಒಟ್ಟು ಎಷ್ಟು ಖರ್ಚಾಯಿತು?

೨. ಒಂದು ಮಾಸಿ ಬಂಗಾರಕ್ಕೆ ೧ ರೂ. ೧೪ ಆ. ೬ ಪೈ. ಆದರೆ ೫ ತೊಲೆ ಬಂಗಾರದ ಬೆಲೆ ಏನು ?

೩. ಒಂದು ಕೋಟು ಹೊಲಿಸಲಿಕ್ಕೆ ೫ ರೂ, ೪ ಆ. ೬ ಪೈ ಬೀಳುವದು. ಇಂಥ ೨೩ ಕೋಟು ಹೊಲಿಸಿದರೆ ಎಷ್ಟು ಖರ್ಚಾಗುವದು ?

೪. ಒಬ್ಬ ಸಾಲೆಯ ಹುಡುಗನ ಬಗ್ಗೆ ತಿಂಗಳಿಗೆ ೧೬ ರೂ. ೧೩ ಆ. ೯ ಪೈ ಖರ್ಚು ಬರುವದು. ೨ ವರ್ಷದಲ್ಲಿ ಅವನ ಬಗ್ಗೆ ಎಷ್ಟು ಖರ್ಚು ಬರುವದು ?

೫. ಒಂದು ಚಹದ ಅಂಗಡಿಯಲ್ಲಿ ದಿನಾಲು ೪೨ ರೂ. ೫ ಆ. ೬ ಪೈಯ ಸಾಮಾನು ಖರ್ಚಾದರೆ, ಅಗಸ್ಟ ತಿಂಗಳಲ್ಲಿ ( ೩೧ ದಿನ ) ಎಷ್ಟು ವ್ಯಾಪಾರವಾಗುವದು?

೬. ೨೪ ಥಾನು ಅರಿವೆಯ ೧೬ ಗಂಟುಗಳನ್ನು ಮುಂಬಯಿಯಿಂದ ತರಿಸಿದೆವು. ಒಂದು ಥಾನಿನ ಬೆಲೆ ೧೨ ರೂ. ೧೩ ಆ. ೬ ಪೈ. ಆದರೆ ಎಲ್ಲ ಗಂಟುಗಳ ಬೆಲೆ ಎಷ್ಟು ?

೭. ಒಂದು ಪೌಂಡಿಗೆ ೧ ರೂ. ೧೧ ಆ. ಯಂತೆ ೧೧೨ ಪೌಂಡು ಚಹ ಹಾಗು ೧ ಪೌಂಡಿಗೆ ೧೪ ಆ. ಯಂತೆ ೫೬ ಪೌಂಡು ಕಾಫಿ ತರಿಸಿದರೆ ಒಟ್ಟು ಎಷ್ಟು ಕೊಡಬೇಕು ?

೮. ಒಬ್ಬ ಒಕ್ಕಲಿಗನು ೧೨ರೂ. ೭ಆ. ಗೆ ಒಂದರಂತೆ ೨೪ ಕರುಗಳನ್ನೂ ೪ ರೂ. ೯ ಆ. ೬ ಪೈಗೆ ಒಂದರಂತೆ ೩೬ ಕುರಿಗಳನ್ನೂ ಮಾರಿದರೆ ಅವನಿಗೆ ಒಟ್ಟು ಎಷ್ಟು ಹಣ ಬರುವದು ?

೯. ಒಬ್ಬ ಮನುಷ್ಯನ ವರ್ಷದ ಉತ್ಪನ್ನವು ೨೩೦೮ ರೂ. ೧೨ ಆ. ೯ ಪೈ ಅದೆ; ಅದರಲ್ಲಿ ೧೮೯೬ ರೂ. ೮ ಆ. ೬ ಪೈ ಅವನು ಖರ್ಚು ಮಾಡುವನು. ೧೫ ವರ್ಷದಲ್ಲಿ ಅವನಲ್ಲಿ ಎಷ್ಟು ಹಣ ಕೂಡುವದು ?

೧೦. ಒಂದು ಕಾಲಗಾಡಿಗೆ ಕಂತಿನಿಂದ ರೊಕ್ಕ ಕೊಟ್ಟರೆ ತಿಂಗಳಿಗೆ ೧೨ ರೂ. ೧೨ ಆ. ೬ ಪೈಯಂತೆ ಒಂದು ವರ್ಷ ಕೊಡಬೇಕು; ಒಮ್ಮೆಲೆ ಕೊಟ್ಟರೆ ೧೨೦ ರೂ. ೮ ಆ. ಬೀಳುವದು. ಯಾವದರಿಂದ ಎಷ್ಟು ಉಳಿಯುವದು!

೧೧. ಒಂದು ಮೋಟಾರದ ಬೆಲೆ ೨೫೩ ಪೌ. ೧೧ ಶಿ. ಆದರೆ ೧೩ ಮೋಟಾರಗಳನ್ನು ತರಿಸಿದರೆ ಎಷ್ಟು ಕೊಡಬೇಕು ?

೧೨. ಒಬ್ಬನು ೨ ಪೌ. ೧೩ ಶಿ. ೭ ಪೆ. ಗೆ ಒಂದರಂತೆ ೨೫ ಕಿಸೆಯ ಗಡಿಯಾರಗಳನ್ನೂ ೩ಪೌ. ೧೪ಶಿ. ೫ ಪೇ.ಗೆ ಒಂದರಂತೆ ೧೭ ಕಚೇರಿಯ ಗಡಿಯಾರಗಳನ್ನೂ ತರಿಸಿದರೆ ಎಷ್ಟು ಖರ್ಚಾಗುವದು ?

| | ರೂ. | ಆ. | ಪೈ | | ಅ | ಬ | ಕ | ಡ | ಇ |
|---|---|---|---|---|---|---|---|---|---|
| ೧೩. | ೨೭ | ೧೦ | ೮ | × | ೨ | ೪ | ೬ | ೮ | ೨೦ |
| ೧೪. | ೩ | ೩ | ೬ | × | ೩ | ೫ | ೭ | ೯ | ೧೧ |
| ೧೫. | ೫೪ | ೧೪ | ೫ | × | ೧೧ | ೧೩ | ೧೫ | ೧೭ | ೧೯ |
| ೧೬. | ೨೭ | ೧೧ | ೭ | × | ೨೮ | ೩೬ | ೪೫ | ೫೪ | ೬೨ |
| ೧೭. | ೧೨೫ | ೧೩ | ೯ | × | ೧೯ | ೨೭ | ೩೧ | ೩೫ | ೪೫ |
| ೧೮. | ೨೫೦ | ೬ | ೧೧ | × | ೪೩ | ೫೬ | ೬೪ | ೭೨ | ೭೮ |
| ೧೯. | ೩೮೨ | ೧೫ | ೪ | × | ೬೩ | ೭೪ | ೮೧ | ೯೬ | ೧೦೦ |
| ೨೦. | ೨೦೫ | ೭ | ೩ | × | ೧೨೯ | ೨೪೮ | ೩೧೫ | ೪೦೮ | ೫೮೨ |
| ೨೧. | ೩೪೬ | ೯ | ೨ | × | ೪೦೬ | ೫೨೬ | ೬೭೪ | ೭೦೫ | ೧೦೦ |
| ೨೨. | ೧೨೫ | ೭ | ೬ | × | ೬೪ | ೭೬ | ೮೪ | ೯೬ | ೧೦೨ |
| | ಪೌ. | ಶಿ. | ಪೆ. | | | | | | |
| ೨೩. | ೨೫೪ | ೧೩ | ೮ | × | ೧೧೨ | ೨೪೦ | ೩೧೬ | ೫೦೮ | ೬೦೦ |
| ೨೪. | ೫೬೮ | ೧೪ | ೧೧ | × | ೨೨೮ | ೩೪೫ | ೪೫೬ | ೫೬೦ | ೫೩೮ |

---

## ವಿವಿಧ ಪರಿಮಾಣಗಳ ಭಾಗಾಕಾರ.

**ಮಾ. ಲೆಕ್ಕ:—೩೩.** ೩ ಆಣೆಗೆ ಒಂದು ಗೊಂಬೆಯಂತೆ ೪ ರೂ. ೧೧ ಆ. ಕೊಟ್ಟು ಎಷ್ಟು ಗೊಂಬೆಗಳನ್ನು ತರುವಿರಿ ?

ಇಲ್ಲಿ ೩ ಆಣೆಯ ಗುಂಪುಗಳು ೪ ರೂ. ೧೧ ಆಣೆ (ಅಂದರೆ ೭೫ಆಣೆ) ಯಲ್ಲಿ ಎಷ್ಟು ಆಗುವವೆಂಬದನ್ನು ತೆಗೆಯಬೇಕು. ಗುಂಪು ಮಾಡಬೇಕಾದ್ದರಿಂದ ಭಾಗಾಕಾರ.

| | |
|---|---|
| ೪ ರೂ. ೧೧ ಆ. | ೪ ರೂ. ೧೧ ಆ. |
| ೭೫ ಆ ÷ ೩ ಆ. | ೬೪ ಆ. |
| ಅಂದರೆ ೭೫ ÷ ೩ = ೨೫. | ೭೫ ಆ. |

**೨೫ ಗುಂಪು ಆದವು. ಆದ್ದರಿಂದ ೨೫ ಗೊಂಬೆ ಉತ್ತರ.**

## ಲೆಕ್ಕಗಳ ಗುಂಪು:—೫೦. (ಬಾಯಿಲೆಕ್ಕ)

೧. ೧೫ ಆಣೆಯಲ್ಲಿ ೩ ಆಣೆಯ ಗುಂಪು ಎಷ್ಟು ?

೨. ೭ ಆಣೆಗೊಂದು ಸಾಬಾಣದ ಉಂಡಿಯಂತೆ ೧ ರೂ. ೫ ಆಣೆ ಕೊಟ್ಟರೆ ಎಷ್ಟು ಸಾಬಾಣ ಬರುವವು ?

೩. ೩ ಆಣೆಗೆ ಒಂದು ಸೇರು ಬೆಣ್ಣೆ ಬರುವದು. ೩ ರೂ. ಕೊಟ್ಟು ಎಷ್ಟು ಬೆಣ್ಣೆ ತರುವಿರಿ ?

೪. ನಮ್ಮಲ್ಲಿ ೨೫ ರೂ. ಅವೆ. ೫ ರೂ. ಗೆ ಒಂದು ಜರದ ಟೊಪ್ಪಿಗೆಯಂತೆ ಎಷ್ಟು ಟೊಪ್ಪಿಗೆಗಳನ್ನು ತರಬಹುದು ?

೫. ಸಾಹೇಬರಿಗೆ ದಿನದ ಚಹದ ಖರ್ಚು ೪ ಶಿಲಿಂಗು ಬರುವದು. ಆದರೆ ೧ ಪೌಂಡು, ೧೨ ಶಿಲಿಂಗು ಅವರಿಗೆ ಎಷ್ಟು ದಿನ ಸಾಲುವದು ?

## ಲೆಕ್ಕಗಳ ಗುಂಪು:—೫೧.

೧. ೨೫ ರೂ. ೪ ಆ. ಗೆ ಒಂದು ಸೀರೆಯಂತೆ ೮೦೮ ರೂ. ಗಳ ಸೀರೆಗಳನ್ನು ಕೊಂಡೆವು. ಎಷ್ಟು ಸೀರೆಗಳು ಬಂದವು ?

೨. ೨ ಆ. ೯ ಪೈಗೆ ಒಂದು ಸೇರಿನಂತೆ ಬೆಣ್ಣೆಯ ಧಾರಣೆಯಿದ್ದಾಗ್ಗೆ ೬೬ ರೂ. ಗಳ ಬೆಣ್ಣೆಯನ್ನು ತೆಗೆದುಕೊಂಡೆವು. ಆ ಬೆಣ್ಣೆಯ ತೂಕವೆಷ್ಟು ?

೩. ೧ ರೂ. ೨ ಆ. ಗೆ ಒಂದು ವಾರಿನಂತೆ ೫೪ ರೂ. ಗಳ ಕೋಟಿನ ಅರಿವೆಯನ್ನು ಕೊಂಡರೆ ಎಷ್ಟು ವಾರು (ಯಾರ್ಡು) ಅರಿವೆ ಬರುವದು ?

೪. ಒಂದು ಬೋರ್ಡಿಂಗಿನಲ್ಲಿ ಒಂದು ತಿಂಗಳಲ್ಲಿ ೬೧೬ ರೂ. ೮ ಆ. ಖರ್ಚಾದದ್ದು ಕಂಡುಬಂತು. ಪ್ರತಿಯೊಬ್ಬನ ಊಟದ ಖರ್ಚು ೧೦ ರೂ. ೧೨ ಆಣೆ ಬಂತು ಎಂದು ತಿಳಿದರೆ, ಆ ಬೋರ್ಡಿಂಗಿನಲ್ಲಿ ಎಷ್ಟು ಜನರು ಊಟ ಮಾಡುತ್ತಿರುವರು ?

೫. ೧ ಪೌಂಡು ೧೬ ಶಿಲಿಂಗು ಪ್ರತಿಯೊಬ್ಬನಿಗೆ ಬರುವಂತೆ ೨೨೫ ಪೌ. ಗಳನ್ನು ಎಷ್ಟು ಜನರಲ್ಲಿ ಹಂಚಬಹುದು ?

**ಮಾ. ಲೆಕ್ಕ:—೩೪. ೪೩ ರೂ. ೬ ಆ. ೬ಪೈಗಳನ್ನು ೯ ಜನರಲ್ಲಿ ಸರಿಯಾಗಿ ಹಂಚಿರಿ.**

ಹಂಚಬೇಕಾದ್ದರಿಂದ ಭಾಗಾಕಾರ.

```
         ೪ ರೂ.    ೧೩ ಆ.    ೨ ಪೈ
    ---------------------------------
  ೯ | ೪೩ರೂ.       ೬ಆ.     ೬ಪೈ
    | ೩೬        +೧೧೨      ೧೨
      ----      -----     ----
       ೭         ೧೧೮      ೧೮
                 -೯೦      ೧೮
                 -----    ----
                  ೨೮       ..
                  ೨೭
                 -----
                   ೧
```

ಬಾಕಿಯಾಗುವ ರೂ. ಹಾಗು ಆ. ಗಳ ಸಂಖ್ಯೆಗೆ ೧೬ ಹಾಗು ೧೨ರಿಂದ ಗುಣಿಸಿ ಆ. ಮತ್ತು ಪೈ. ಮಾಡಿ, ಲೆಕ್ಕದ ಆ. ಮತ್ತು ಪೈ. ಕೂಡಿಸಿದೆ.

ಇದನ್ನು ಸಂಕ್ಷಿಪ್ತವಾಗಿ ಕೆಳಗಿನಂತೆ ಮಾಡುವದುಂಟು.

```
  ೯ | ೪೩ರೂ.    ೬ಆ.    ೬ಪೈ
    |------------------------
    | ೪ರೂ.    ೧೩ಆ.    ೨ಪೈ
```

೪೩ರೂ÷೯=೪ರೂ. ಬಾಕಿ. ೭ರೂ.

೭ರೂ. ೬ಆ=೧೧೮ ಆ.

೧೧೮ಆ÷೯=೧೩ಆ. ಬಾಕಿ. ೧ಆಣೆ

೧ಆ. ೬ ಪೈ=೧೮ ಪೈ.

೧೮ಪೈ. ÷ ೯=೨ ಪೈ.

### ಲೆಕ್ಕಗಳ ಗುಂಪು:—೫೨. (ಬಾಯಿಲೆಕ್ಕ)

೧. ೫ ರೂ. ೪ ಆ. ಗಳನ್ನು ೬ ಹುಡುಗರಲ್ಲಿ ಹಂಚಿದರೆ ಒಬ್ಬನಿಗೆ ಎಷ್ಟು ಬರುವದು ?

೨. ೬ ಪುಸ್ತಕಗಳಿಗೆ ೧ ರೂ. ೧೪ ಆ. ಒಂದು ಪುಸ್ತಕದ ಬೆಲೆ ಏನು ?

೩. ೮ಯಾ. ಅರಿವೆಗೆ ೪ರೂ. ೧೨ಆ. ಆದರೆ ಒಂದು ಯಾರ್ಡಿಗೆ ಎಷ್ಟು ?

೪. ೧೨ಎಕರೆ ಹೊಲಬಿತ್ತಲಿಕ್ಕೆ ೧೬ರೂ. ೮ಆ. ಒಂದು ಎಕರೆಬಿತ್ತಲಿಕ್ಕೆ ?

೫. ೧೬ ಆಳುಗಳನ್ನು ಒಂದು ವಾರ ಕೆಲಸಕ್ಕೆ ಹಚ್ಚಿ ೨೮ ರೂ. ಕೂಲಿ ಕೊಟ್ಟೆವು. ಒಂದು ಆಳಿನ ವಾರದ ಕೂಲಿ ಎಷ್ಟಾಯಿತು ?

೬. ೨ ಪೌ. ೧೫ ಶಿ. ಗೆ ೫ ಜೋಡು ಬೂಟ ಬಂದರೆ, ಒಂದು ಜೋಡು ಬೂಟಿನ ಬೆಲೆ ಏನು ?

೭. ೫ ಪೌ. ೧೨ ಶಿ. ಕೊಟ್ಟು ೧೬ ಕಂದೀಲು ತರಿಸಿದರೆ ಪ್ರತಿಯೊಂದು ಕಂದೀಲಿಗೆ ಎಷ್ಟು ಬಿದ್ದಂತಾಯಿತು ?

### ಲೆಕ್ಕಗಳ ಗುಂಪು :—೫೩.

೧. ಒಂದು ಕಚೇರಿಯಲ್ಲಿ ಒಂದು ವರ್ಷದಲ್ಲಿ ೫೦ರೂ. ೧೦ಆ. ತಿಕೀಟು ಖರ್ಚಾದವು. ಒಂದು ತಿಂಗಳಲ್ಲಿ ಎಷ್ಟು ಖರ್ಚಾದಂತಾಯಿತು ?

೨. ೨೫ ಆಕಳ ಬೆಲೆಯು ೭೯೦ ರೂ. ೧೦ ಆ. ಆದರೆ ೧ ಆಕಳಿಗೇನು?

೩. ೩೦ ಹುಡುಗರ ಊಟದ ಬಗ್ಗೆ ಒಂದು ತಿಂಗಳ ಖರ್ಚು ೨೧೯ರೂ. ೧೩ ಆ. ೬ ಪೈ. ಬಂತು. ಪ್ರತಿಯೊಬ್ಬನು ಎಷ್ಟು ಕೊಡಬೇಕಾಯಿತು?

೪. ೧೨೮ ಪೌಂಡು ಬಿಸ್ಕೀಟಿನ ಬೆಲೆಯು ೧೦೮ ರೂ. ೧೦ ಆ. ೮ ಪೈ. ಆದರೆ ಒಂದು ಪೌಂಡಿಗೆ ಎಷ್ಟು ಬಿದ್ದಂತಾಯಿತು.

೫. ಒಬ್ಬನು ೫ಎತ್ತುಗಳನ್ನು ೫೭ರೂ. ೧೨ಆ. ಗೆ ಒಂದರಂತೆ ಮಾರಿ ಬಂದ ಹಣದಿಂದ ೯೫ ಕುರಿ ಕೊಂಡನು ಒಂದು ಕುರಿಗೆ ಎಷ್ಟು ಕೊಟ್ಟನು.

೬. ೧೪ ಮಂದಿ ಕೂಡಿ ೮ ಪೌ. ೧೨ ಶಿ ೮ ಪೆ. ಹಾಸಲು ಕೊಟ್ಟರು. ಪ್ರತಿಯೊಬ್ಬನು ಎಷ್ಟು ಕೊಟ್ಟಂತಾಯಿತು.

೭. ೮೧ಆಕಳುಗಳನ್ನು ೩೯೮ಪೌ. ೫ಶಿ. ಗೆ ಮಾರಿದರೆ ೧ಆ. ಬೆಲೆಎಷ್ಟು?

೮. ೧೬ ಮಂದಿ ದೊಡ್ಡವರೂ ೧೨ ಹುಡುಗರೂ ಕೂಡಿ ಒಂದು ವಾರದಲ್ಲಿ ೮೯ರೂ. ೪ಆ. ಗಳಿಸಿದರು. ದೊಡ್ಡವರ ಒಟ್ಟು ಕೂಲಿಯು ೬೩ರೂ. ಆದರೆ ಪ್ರತಿಯೊಬ್ಬ ಹುಡುಗನ ವಾರದ ಕೂಲಿಯು ಎಷ್ಟು ?

೯. ಒಬ್ಬ ಕುಂಬಾರನು ತಿಂಗಳಲ್ಲಿ ೨೪ ದಿನ ದುಡಿದು ೩೧ ರೂ. ೨ ಆ. ಗಳಿಸುವನು. ಅವನಿಗೆ ದಿನಗೂಲಿ ಎಷ್ಟು ಬಿದ್ದಂತೆ ಆಯಿತು ?

೧೦. ಒಬ್ಬ ಬಡಗಿಯು ಒಂದು ಮನೆಯ ಮಡಿಗೆ ಮಾಡುವದನ್ನು೨೧೩ರೂ. ೮ಆ. ಗೆ ಗುತ್ತಿಗೆ ಹಿಡಿದನು. ೪ ತಿಂಗಳಲ್ಲಿ ಆ ಕೆಲಸವು ಮುಗಿಯಿತು. ಅವನಿಗೆ ದಿನಗೂಲಿ ಎಷ್ಟು ಬಿತ್ತು? ( ೧ ತಿ=೪ ವಾರ. )

| | ರೂ. | ಆ. | ಪೈ | | ಅ | ಬ | ಕ | ಡ | ಇ |
|---|---|---|---|---|---|---|---|---|---|
| ೧೧. | ೭೬ | ೧೩ | ೫ | ÷ | ೮ | ೧೨ | ೧೫ | ೧೮ | ೨೧ |
| ೧೨. | ೧೨೮ | ೧೨ | ೩ | ÷ | ೨೪ | ೨೭ | ೩೨ | ೩೬ | ೪೦ |
| ೧೩. | ೨೫೭ | ೩ | ೭ | ÷ | ೩೫ | ೪೧ | ೫೪ | ೬೩ | ೮೧ |
| ೧೪. | ೫೩೬ | ೨ | ೪ | ÷ | ೮೪ | ೯೬ | ೧೧೨ | ೧೨೮ | ೧೪೦ |
| ೧೫. | ೪೫೫೭ | ೪ | ೨ | ÷ | ೪೨೮ | ೫೬೩ | ೬೨೪ | ೭೫೬ | ೮೦೨ |
| ೧೬. | ೫೦೩೬ | ೭ | ೬ | ÷ | ೩೬೪ | ೪೦೫ | ೫೧೦ | ೬೦೯ | ೭೭೩ |
| | ಪೌ. | ಶಿ. | ಪೆ. | | | | | | |
| ೧೭. | ೮೬೪ | ೨ | ೩ | ÷ | ೧೦೮ | ೨೪೪ | ೨೫೮ | ೩೧೦ | ೪೧೨ |
| ೧೮. | ೧೦೩೮ | ೧೧ | ೮ | ÷ | ೪೮ | ೫೬ | ೪೮೦ | ೬೦೦ | ೬೪೦ |

# ವಿವಿಧ ಪರಿಮಾಣಗಳ ಬೇರೀಜು ವಜಾಬಾಕಿ.

## ( ಅಳತೆ, ತೂಕ. )

### ಲೆಕ್ಕಗಳ ಗುಂಪು:—೫೪. ( ಬಾಯಿಲೆಕ್ಕ )

( ಉಜಳಣಿ. )

೧. ಅ. ೧ ಫೂಟನಲ್ಲಿ ಇಂಚು ಬ. ೪ ಯಾರ್ಡಿನಲ್ಲಿ ಫೂಟು ಎಷ್ಟು ?
೨. ಅ. ೧ ಪೌಂಡಿನಲ್ಲಿ ಔಂಸು ಬ. ೧ ತೊಲಿಯಲ್ಲಿ ಮಾಸಿ ಎಷ್ಟು ?
೩. ೨ ಮಾಸಿಯಲ್ಲಿ ಗುಂಜಿ ಎಷ್ಟು ? ೪. ಮೂರುವಾರದಲ್ಲಿ ದಿವಸ ಎಷ್ಟು?
೫. ೪೮ ತಾಸು ಅಂದರೆ ಎಷ್ಟು ದಿನ? ೬. ಒಂದು ತಿಂಗಳಲ್ಲಿ ಎಷ್ಟು ದಿನ ?
೭. ೨ ತಾಸಿನಲ್ಲಿ ಮಿನಿಟು ಎಷ್ಟು ?
೮. ಒಂದು ಮೈಲಿನಲ್ಲಿ ಆಗುವ ಫರ್ಲಾಂಗು, ಯಾರ್ಡು ಹೇಳಿರಿ.

**ಮಾ. ಲೆಕ್ಕ:-೩೫.** ಗೋವಿಂದನಲ್ಲಿ ೩ ದಾರದ ಉಂಡಿ ಅವೆ. ಪ್ರತಿಯೊಂದು ಉಂಡಿಯಲ್ಲಿಯ ದಾರದ ಉದ್ದಳತೆ ೧೫ ಯಾ. ೨ಫೂಟು ೩ ಇಂ. ೨೮ ಯಾ. ೧ ಫೂ. ೮ ಇಂ. ಹಾಗು ೩೫ ಯಾ. ೨ ಫೂ. ೯ ಇಂ. ಇತ್ತು. ಈ ಉಂಡಿಗಳಲ್ಲಿರುವ ಒಟ್ಟು ದಾರವೆಷ್ಟು ?
ಇಲ್ಲಿ ಒಟ್ಟು ಉದ್ದಳತೆ ಬೇಕಾಗಿದೆ. ಆದ್ದರಿಂದ ಬೇರೀಜು.

| ಯಾ. | ಫೂ. | ಇ. | |
|---|---|---|---|
| ೧೫ | ೨ | ೫ | ೨೨ ಇಂ.=೧ಫೂ. ೧೦ ಇಂ. **ಹತ್ತು** ಇಂ. ಕೈಲಿ ೧ ಫೂ. |
| ೨೮ | ೧ | ೮ | ೬ ಫೂ.=೨ ಯಾ. **ಪೂಜಿ** ಫೂ. ಕೈಲಿ ೨ ಯಾ. |
| ೩೫ | ೨ | ೯ | **ಎಂಬತ್ತು ಯಾರ್ಡು** |
| ೮೦ | ೦ | ೧೦ | |

**ಮಾ. ಲೆಕ್ಕ:-೩೬.** ಒಂದು ಬೆಲ್ಲದ ಪೆಂಟೆಯ ತೂಕವು, ೨ ಮಣ. ೧ ಪಂಥೇರು ೩ ಸೇರು ಅದೆ. ಮತ್ತೊಂದರ ತೂಕವು, ೧ ಮಣ ೩ ಧಡ. ೨ ಸೇರು ಅದೆ. ಇವೆರಡರಲ್ಲಿಯ ಅಂತರವೆಷ್ಟು ?
ಇಲ್ಲಿ ಅಂತರ ಬೇಕಾಗಿದೆ ಆದ್ದರಿಂದ ವಜಾಬಾಕಿ.

| | | | | |
|---|---|---|---|---|
| ೨ ಮ. | ೦ ಧ. | ೧ ಪಂ. | ೩ ಸೇ. | ೧ ಪಂ. = ೬ ಸೇರು |
| ೧ ಮ. | ೩ ಧ. | ೦ ಪಂ. | ೪ ಸೇ. | ೪ ಧ. = ೧ ಮಣ |
| | ೧ ಧ. | ೦ ಪಂ. | ೫ ಸೇ. | ೧ ಧ. ೫ ಸೇ. ಉತ್ತರ |

## ಲೆಕ್ಕಗಳ ಗುಂಪು:— ೫೫.

೧. ಒಬ್ಬ ಹುಡುಗನು ಪಾದದಿಂದ ಟೊಂಕದವರೆಗೆ ೨ ಫೂ. ೫ ಇಂಚು ಹಾಗು ಟೊಂಕದಿಂದ ತಲೆಯುವರೆಗೆ ೨ ಫೂ. ೩ ಇ. ಇದ್ದರೆ ಅವನ ಎತ್ತರವೆಷ್ಟು ?

೨. ಒಂದು ಅಂಗಡಿಯಲ್ಲಿ ೫ ತೊ. ೬ ಮಾ; ಮತ್ತೊಂದರಲ್ಲಿ ೧೨ ತೊ. ೭ ಮಾ. ೩ ಗು. ಬೆಳ್ಳಿಯನ್ನು ಕೊಂಡರೆ ಒಟ್ಟು ಎಷ್ಟು ಕೊಂಡಂತಾಯಿತು ?

೩. ಊರಲ್ಲಿಯ ಎಲ್ಲ ಗುಡಿಗಳಲ್ಲಿ ದೀಪ ಹಚ್ಚಲಿಕ್ಕೆ ೧ ಧ. ೫ ಸೇ. ತುಪ್ಪ ಹಾಗು ಊಟಕ್ಕೆ ೨. ಧ. ೩ ಸೇ. ಬೇಕಾದರೆ ಒಟ್ಟು ಎಷ್ಟು ತುಪ್ಪ ಬೇಕಾಯಿತು ?

೪. ಒಬ್ಬ ಹುಡುಗನು ದಿನಾಲು ಮನೆಯಲ್ಲಿ ೨ ತಾ. ೧೫ ಮಿ. ಸಾಲೆಯಲ್ಲಿ ೩ ತಾಸು ೪೮ ಮಿ. ಅಭ್ಯಾಸ ಮಾಡಿದರೆ, ಅವನು ದಿನಾಲು ಎಷ್ಟು ಅಭ್ಯಾಸ ಮಾಡಿದಂತಾಯಿತು ?

೫. ನನ್ನ ಗಡಿಯಾರವು ಮುಂಜಾನೆ ೧೦ ಗಂಟೆಗೆ ೧೩ ಮಿನಿಟು ಹಿಂದೆ ಇತ್ತು. ಈಗ ಅದರಲ್ಲಿ ೨ ಹೊಡೆದು ೫೩ ಮಿನಿಟಾಗಿದೆ. ಆದರೆ ಈಗ ಸರಿಯಾದ ಹೊತ್ತು ಎಷ್ಟು ಆಗಿರುವದು ?

೬. ಅಕ್ಕನ ಉಂಗುರವು ೧ ತೊ. ೩ ಮಾ. ಯದು, ತಂಗಿಯದು ೧ತೊ. ೩ ಗು. ಯದು. ಇವೆರಡೂ ಉಂಗುರಗಳ ತೂಕದಲ್ಲಿ ಅಂತರವೆಷ್ಟು ?

೭. ಒಂದು ಹಗ್ಗವು ೧೩ ಯಾ. ೭ ಇ. ಅದೆ. ಮತ್ತೊಂದು ಇದಕ್ಕಿಂತ ೧೧ ಇ. ಕಡಿಮೆ ಇದೆ. ಎರಡನೆಯು ಹಗ್ಗದ ಉದ್ದಳತೆ ಎಷ್ಟು ?

೮. ಒಂದು ಬೆಲ್ಲದ ಪೆಂಟೆಯ ತೂಕವು ೨ ಮ. ೧ ಪಂ. ೨ ಸೇ. ಇತ್ತು. ಅದರಲ್ಲಿ ೨ ಧ. ೩ ಸೇ. ಮಾರಾಟವಾದರೆ ಎಷ್ಟು ಬೆಲ್ಲ ಉಳಿಯಿತು ?

೯. ಒಂದು ತಿಂಗಳಾಗಲಿಕ್ಕೆ ೭ ತಾಸು ಕಡಿಮೆ ಇದೆ. ಅಂದರೆ ಎಷ್ಟು ದಿನ ಎಷ್ಟು ತಾಸು ಆಗಿರುವವು ?

೧೦. ಒಂದು ಸಿನಿಮಾ ಆಟದ ಪಡದೆಯು ೧೬ ಫೂ. ೯ ಇ. ಅಗಲವಿದೆ. ಅದರಲ್ಲಿ ೧೩ ಫೂ. ೧೦ ಇಂಚು ಅಗಲವಾದ ಚಿತ್ರಗಳು ಕಾಣುತ್ತವೆ. ಆ ಪಡದೆಯ ಎಷ್ಟು ಭಾಗದಲ್ಲಿ ಚಿತ್ರಗಳು ಮೂಡುವದಿಲ್ಲ ?

೧೧. ಒಂದು ತಾರಕಂಬವು ೧ ಯಾ. ೧ ಫೂ. ೩ ಇ. ನೆಲದಲ್ಲಿ, ೨ ಫೂ. ೮ ಇ. ನೀರಿನಲ್ಲಿ ಇದ್ದು ಹೊರಗೆ ೫ ಯಾ. ೧ ಫೂ. ೩ ಇ. ಕಾಣುತ್ತದೆ. ಅದರ ಒಟ್ಟು ಉದ್ದಳತೆ ಎಷ್ಟು?

೧೨. ಒಬ್ಬನು ೨ ಮೈ. ೩ ಫ. ನಡೆಯುತ್ತ ಹೋದನು. ೪ ಮೈ. ೭ ಫ. ೧೨೦ ಯಾ. ಕಾಲುಗಾಡಿಯಿಂದ ಹೋದನು. ಮುಂದೆ ಉಗಿಬಂಡಿಯಿಂದ ೧೩ ಮೈ. ೬ ಫ. ೧೨೫ ಯಾರ್ಡು ಹೋದನು. ಇವನು ಒಟ್ಟು ಎಷ್ಟು ದೂರ ಹೋದಂತಾಯಿತು ?

೧೩. ಒಬ ಗೃಹಸ್ಥನು ೧೮ ತೊ. ೩ ಮಾ. ೫ ಗುಂಜಿ ತೂಕದ ಒಂದು ಸರಿಗೆ, ಇದಕ್ಕೂ ೪ ತೊ. ೨ ಮಾ. ೭ ಗು. ಹೆಚ್ಚು ತೂಕದ ಒಂದು ಜೋಡು ಪಾಟಲಿ ಹಾಗು ೫ ಮಾ. ೬ ಗು. ತೂಕದ ಒಂದು ಹೂ ಮಾಡಿಸಿದನು. ಅವನಿಗೆ ಒಟ್ಟು ಎಷ್ಟು ಬಂಗಾರ ಹತ್ತಿತು ?

೧೪. ತುಂಗವ್ವನು ಸೋಮವಾರ ಮಧ್ಯಾಹ್ನ ೧೨ ಕ್ಕೆ ಮೋಟಾರದಿಂದ ಹೊರಟಳು. ಸಂಜೆಗೆ ೪–೧೪ಕ್ಕೆ ಮೋಟಾರವು ರಸ್ತೆಯಲ್ಲಿ ನಿಂತಿತು. ಅದು ಮರುದಿನ ಮುಂಜಾನೆ ೧೧–೩೦ಕ್ಕೆ ಅಲ್ಲಿಂದ ಹೊರಟು ಮಧ್ಯಾಹ್ನ ೨–೧೫ಕ್ಕೆ ಸ್ಟೇಶನಕ್ಕೆ ಮುಟ್ಟಿತು. ಆಕೆ ರಾತ್ರಿ ೧೦–೩೦ ಕ್ಕೆ ಮನೆಮುಟ್ಟಿದಳು. ಆಕೆ ಎಷ್ಟು ಹೊತ್ತು ಪ್ರವಾಸದಲ್ಲಿದ್ದಳು ?

೧೫. ಮೇಲಿನ ಲೆಕ್ಕದಲ್ಲಿ ಮೋಟಾರು ನಿಂತದ್ದರಿಂದ ತುಂಗವ್ವನು ದಾರಿಯಲ್ಲಿ ಎಷ್ಟು ಹೊತ್ತು ಸುಮ್ಮನೆ ಕೂಡಬೇಕಾಯಿತು ?

೧೬. ಒಬ್ಬ ಹುಡುಗನು ಲಗ್ನಕ್ಕಾಗಿ ೧೭ ದಿನ ಊರಿಗೆ ಹೋದನು; ೪ ತಿಂ. ೧೯ ದಿ. ಸೂಟಿಯು ಮೂಲಕ ಸಾಲೆಯಿದ್ದಿಲ್ಲ. ೧ ತಿಂ. ೧೨ ದಿ ಬೇನೆ ಬಿದ್ದನು. ಅವನು ಆ ವರ್ಷ ಸಾಲೆಗೆ ಹೋದ ದಿನಗಳೆಷ್ಟು ? ಬೇರೀಜು ಮಾಡಿರಿ.

| | ಯಾ. | ಫೂ. | ಇ. | | ತೊ. | ಮಾ. | ಗು. | | ಮ. | ಧ. | ಸೇ. |
|---|---|---|---|---|---|---|---|---|---|---|---|
| ೧೭. | ೨ | ೧ | ೫ | ೧೮. | ೧೫ | ೫ | ೨ | ೧೯. | ೫ | ೦ | ೩ |
| | ೩ | ೨ | ೮ | | ೧೨ | ೭ | ೬ | | ೪ | ೩ | ೪ |
| | ೪ | ೧ | ೪ | | ೮ | ೧೦ | ೩ | | ೩ | ೧ | ೫ |
| | ೩ | ೨ | ೭ | | ೬ | ೮ | ೪ | | ೨ | ೨ | ೪ |

| | ಮೈ. | ಫ. | ಯಾ. | | ದಿ. | ತಾ. | ಮಿ. | ಸೆ. |
|---|---|---|---|---|---|---|---|---|
| ೨೦. | ೭ | ೫ | ೧೨೦ | ೨೧. | ೨೫ | ೭ | ೧೫ | ೩ |
| | ೫ | ೭ | ೫೮ | | ೧೫ | ೧೫ | ೪೦ | ೨೭ |
| | ೪ | ೩ | ೧೨೪ | | ೧೭ | ೧೭ | ೧೨ | ೦ |
| | ೩ | ೬ | ೧೦೮ | | ೧೪ | ೧೮ | ೨೪ | ೫ |

೨೨. ೬ ತಾ. ೨೦ಮಿ. ೧೬ಸೆ. ಗಳಲ್ಲಿ ೫ತಾ. ೩೦ಮಿ. ೨೪ಸೆ. ಕಳೆಯಿರಿ. ವಜಾಬಾಕಿ ಮಾಡಿರಿ.

| | ಯಾ. | ಫೂ. | ಇ. | | ತಾ. | ಮಿ. | ಸೆ. | | ಮೈ. | ಫ. | ಯಾ. |
|---|---|---|---|---|---|---|---|---|---|---|---|
| ೨೩. | ೩೫ | ೧ | ೯ | ೨೪. | ೨೦ | ೧೨ | ೪೫ | ೨೫. | ೭ | ೫ | ೧೪ |
| | ೧೮ | ೨ | ೬ | | ೧೨ | ೪೮ | ೨೪ | | ೫ | ೭ | ೧೧೫ |

| | ಯಾ. | ಫೂ. | ಇ. | | ತಾ. | ಮಿ. | ಸೆ. | | ಮೈ. | ಫ. | ಯಾ. |
|---|---|---|---|---|---|---|---|---|---|---|---|
| ೨೬. | ೫೬ | ೨ | ೩ | ೨೭. | ೧೮ | ೨೪ | ೧೫ | ೨೮. | ೧೩ | ೩ | ೧೦೮ |
| | ೩೮ | ೧ | ೭ | | ೧೩ | ೩೬ | ೪೮ | | ೯ | ೬ | ೧೦೯ |

ಇದು ಗಡಿಯಾರದ ಚಿತ್ರವು. ಸಣ್ಣದು ತಾಸಿನ ಮುಳ್ಳು; ದೊಡ್ಡದು ಮಿನಿಟಿನದು.




**ಲೆಕ್ಕಗಳ ಗುಂಪು:-೫೬.**

೧. (ಅ) ತಾಸಿನ ಮುಳ್ಳು ದಿವಸದಲ್ಲಿ (ಬ) ಮಿನಿಟಿನ ಮುಳ್ಳು ೩ ತಾಸಿನಲ್ಲಿ ಎಷ್ಟು ಸಾರೆ ತಿರುಗುವದು ?

೨. ತಾಸು ಎಷ್ಟಾಗುವವು ಹೇಳಿರಿ. ಹಗಲು— **ಅ.** ೧ ರಿಂದ ೫, **ಬ.** ೩ ರಿಂದ ೬, **ಕ.** ೧೦ ರಿಂದ ೧, **ಡ.** ೧೨ರಿಂದ ೩ರ ವರೆಗೆ **ಇ.** ಹಗಲು ೧೧ರಿಂದ ರಾತ್ರಿ ೮; **ಫ.** ಹಗಲು ೩ ರಿಂದ ರಾತ್ರಿ ೧೨; **ಗ.** ಹಗಲು ೯ ರಿಂದ ರಾತ್ರಿ ೧ ರ ವರೆಗೆ.

೩. ಸೋಮವಾರ ಹ. ೬ ರಿಂದ ರಾ. ೮–೨೦ ವರೆಗೆ; ಮಂಗಳವಾರ ಹ. ೩–೨೦ ರಿಂದ ಬುಧವಾರ ರಾ. ೭–೨೦ ರ ವರೆಗೆ; ಬುಧವಾರ ರಾ. ೨–೪೫ರಿಂದ ಶುಕ್ರವಾರ ಹ. ೯–೩೦ರ ವರೆಗೆ ಮಿನಿಟು ಎಷ್ಟು?

## ಮದ್ರಾಸ ಹಾಗು ಸದರ್ನಮರಾಠಾ ರೇಲ್ವೆಯು ವೇಳಾಪತ್ರಿಕೆಯು

| ಸ್ಟೇಶನ್ | ಹುಬ್ಬಳ್ಳಿ ಪ್ಯಾಸೆಂಜರ | ಮೇಲ | ಪುಣೆ ಪ್ಯಾಸೆಂಜರ | ಸ್ಟೇಶನ್ | ಹುಬ್ಬಳ್ಳಿ ಪ್ಯಾಸೆಂಜರ | ಮೇಲ | ಪುಣೆ ಪ್ಯಾಸೆಂಜರ |
|---|---|---|---|---|---|---|---|
| | ಹಗಲು | ಹಗಲು | ರಾತ್ರಿ | | ಹಗಲು | ಹಗಲು | ರಾತ್ರಿ |
| ಹುಬ್ಬಳ್ಳಿ | ಬಿ. ೭–೪೦ | ೧೨–೫೦ | ೧೦–೩೦ | ಶೇಡಬಾಳ | ೧೦–೫೦ | ೬– ೩ | ೮–೨೯ |
| ಧಾರವಾಡ | ಬ. ೮–೧೯ | ೧–೩೦ | ೧೧– ೧ | ಗೋಕಾಕ ರೋಡ | ೧–೧೦ | ೮– ೯ | ೧೦–೧೮ |
| | ಬಿ. ೮–೨೪ | ೧–೩೫ | ೧೧– ೬ | | | | |
| ಅಳಣಾವರ | ೯–೩೫ | ೨–೪೩ | ೧೨– ೫ | ಬೆಳಗಾವ | ಬ. ೨–೪೫ | ೯–೩೮ | ೧೧–೩೦ |
| | | | | | ಬಿ. ೩– ೦ | ೧೦– ೩ | ೧೧–೪೧ |
| ಲೋಂಡೆ | ಬ. ೧೦–೫೦ | ೩–೫೫ | ೧– ೦ | | | | |
| | ಬಿ. ೧೧–೨೨ | ೪–೨೨ | ೧–೨೦ | ಲೋಂಡೆ | ಬ. ೪–೨೦ | ೧೧–೨೮ | ೧೨–೫೧ |
| | | | | | ಬಿ. ೪–೩೫ | ೧೧–೪೫ | ೧–೧೫ |
| ಬೆಳಗಾವ | ಬ. ೧೨-೪೬ | ೫–೩೮ | ೨–೩೫ | | | | |
| | ಬಿ. ೪–೪೫ | ೫–೫೮ | ೨–೫೫ | ಅಳಣಾವರ | ೫–೫೨ | ೧೨–೪೮ | ೨–೧೪ |
| ಗೋಕಾಕ ರೋಡ | ೬– ೦ | ರಾ. ೭-೧೩ | ೩–೫೮ | ಧಾರವಾಡ | ಬ ರಾ೭-೮ | ೨– ೦ | ೩– ೯ |
| | | | | | ಬಿ. ೭–೧೫ | ೨–೧೦ | ೩–೧೭ |
| ಶೇಡಬಾಳ | ರಾ. ೮–೨೬ | ರಾ. ೯–೨೬ | ಮು೬– ೭ | ಹುಬ್ಬಳ್ಳಿ | ಬ. ೭–೪೫ | ೨–೪೦ | ೩–೫೦ |

೪. ಪ್ಯಾಸೆಂಜರ ಗಾಡಿಯು ಹಗಲು ೮–೨೪ ಕ್ಕೆ ಧಾರವಾಡ ಬಿಟ್ಟು ೧೨–೪೬ಕ್ಕೆ ಬೆಳಗಾವಿಗೆ ಮುಟ್ಟುವದು. ಒಟ್ಟಿಗೆ ಎಷ್ಟು ಹೊತ್ತು ಬೇಕಾಯಿತು ?

೫. ಹುಬ್ಬಳ್ಳಿಯಿಂದ ೭–೪೦ ಕ್ಕೆ ಬಿಡುವ ಗಾಡಿಯು ಲೋಂಡೆ, ಬೆಳಗಾವಿಗಳಿಗೆ ಎಷ್ಟು ಹೊತ್ತಿನಲ್ಲಿ ಮುಟ್ಟುವದು ?

೬. ಶೇಡಬಾಳದಿಂದ ಬೆಳಗಾವಿಗೆ ಹೋಗಲಿಕ್ಕೆ ( ಅ ) ಮೇಲಗಾಡಿಗೆ (ಬ) ಪ್ಯಾಸೆಂಜರ ಗಾಡಿಗೆ ಎಷ್ಟು ಹೊತ್ತು ಹತ್ತುವದು !

೭. ಬೆಳಗಾವಿಯಿಂದ ಹುಬ್ಬಳ್ಳಿಗೆ ಮೇಲಗಾಡಿಗಿಂತ ಪುಣೆ ಪ್ಯಾಸೆಂಜರವು ಎಷ್ಟು ಕಡಿಮೆ ಹೊತ್ತಿನಲ್ಲಿ ಮುಟ್ಟುವದು ?

೮. ಒಬ್ಬನು ಧಾರವಾಡದಿಂದ ಹುಬ್ಬಳ್ಳಿ ಪ್ಯಾಸೆಂಜರ ಗಾಡಿಗೆ ಹೊರಟು ಲೋಂಡೆಗೆ ಹೋಗಿ ಮೇಲಿನಿಂದ ತಿರುಗಿ ಧಾರವಾಡಕ್ಕೆ ಬಂದನು.
(ಅ) ಅವನು ಲೋಂಡೆಯಲ್ಲಿ ಎಷ್ಟು ಹೊತ್ತು ಇದ್ದನು ?
(ಬ) ಗಾಡಿಯಲ್ಲಿ ಒಟ್ಟಿಗೆ ಎಷ್ಟು ಹೊತ್ತು ಇದ್ದನು ?

೯. ಹುಬ್ಬಳ್ಳಿಯಿಂದ ಹೊರಟ ಮೇಲ ಗಾಡಿಯು ಧಾರವಾಡದಿಂದ **೩೪** ಮಿನಿಟು, ಲೋಂಡೆಯಿಂದ **೪೫** ಮಿನಿಟು ತಡಮಾಡಿ ಬಿಟ್ಟಿತು. ಬೆಳಗಾವಿಗೆ **೧೯** ಮಿನಿಟು ತಡಮಾಡಿ ಮುಟ್ಟಿತು. (ಅ) ಅದು ಧಾರವಾಡವನ್ನೂ ಲೋಂಡೆಯನ್ನೂ ಎಷ್ಟು ಗಂಟೆಗೆ ಬಿಟ್ಟಿತು ?
(ಬ) ಬೆಳಗಾವಿಗೆ ಎಷ್ಟು ಹೊತ್ತಿಗೆ ಮುಟ್ಟಿತು ?

೧೦. ಒಬ್ಬನು ಮೇಲಗಾಡಿಯಿಂದ ಬೆಳಗಾವಿಯಿಂದ ಧಾರವಾಡಕ್ಕೆ ಹೋಗುವವನಿದ್ದನು. ಗಾಡಿ ತಪ್ಪಿದ್ದರಿಂದ ಪುಣೆ ಪ್ಯಾಸೆಂಜರಕ್ಕೆ ಹೋದನು. ಗಾಡಿ ತಪ್ಪಿಸಿಕೊಂಡಿದ್ದರಿಂದ ಇವನಿಗೆ ಎಷ್ಟು ಹೊತ್ತು ವ್ಯರ್ಥ ಹೋಯಿತು ?

೧೧. ಹುಬ್ಬಳ್ಳಿಯಿಂದ ಹೊರಟ ಮೇಲಗಾಡಿಯು ಧಾರವಾಡದಲ್ಲಿ **೫** ಮಿನಿಟು, ಲೋಂಡೆಯಲ್ಲಿ **೨೭** ಮಿನಿಟು, ನಿಂತರೆ ಹುಬ್ಬಳ್ಳಿಯಿಂದ ಬೆಳಗಾವಿಗೆ ಅದು ಎಷ್ಟು ವೇಳೆಯಲ್ಲಿ ಬಂದಂತಾಯಿತು ?

**ಲಕ್ಷ್ಯದಲ್ಲಿಡಿರಿ:**—ಏಪ್ರಿಲ, ಜೂನ, ಸಪ್ಟಂಬರ ಹಾಗು ನವ್ಹಂಬರ ತಿಂಗಳುಗಳಲ್ಲಿ **೩೦ ದಿವಸಗಳು;** ಫೆಬ್ರುವರಿಯಲ್ಲಿ **೨೮ ದಿವಸ;** ಉಳಿದ ತಿಂಗಳುಗಳಲ್ಲಿ **೩೧ ದಿವಸಗಳು.** ನಾಲ್ಕು ವರ್ಷ (ಲೀಪ ಇಯರ)ಕ್ಕೊಮ್ಮೆ ಮಾತ್ರ ಫೆಬ್ರುವರಿಯಲ್ಲಿ **೨೯ ದಿವಸ** ಬರುವವು.

---

## ವಿವಿಧ ಪರಿಮಾಣಗಳ ಗುಣಾಕಾರ ಭಾಗಾಕಾರಗಳು

### ( ಅಳತೆ, ತೂಕ )

**ಮಾ. ಲೆಕ್ಕ :—೩೭.** ಒಂದು ಕೋಟಿಗೆ **೩** ವಾರು ( ಯಾರ್ಡು ) **೧** ಫೂಟು **೯** ಇಂಚು ಅರಿವೆ ಬೇಕು. ಆದರೆ **೩೬** ಕೋಟುಗಳಿಗೆ ಎಷ್ಟು ಅರಿವೆ ಬೇಕಾಗುವದು ?

ಒಂದು ಕೋಟಿಗೆ ಬೇಕಾಗುವ ಅರಿವೆಯ **೩೬** ಪಟ್ಟು ಉದ್ದ ಅರಿವೆಯು **೩೬** ಕೋಟಿಗೆ ಬೇಕು. ಆದ್ದರಿಂದ ಗುಣಾಕಾರ.

| | | |
|---|---|---|
| ೩ ಯಾ. | ೧ ಫೂ. | ೯ ಇ. |
| | | × ೩೬ |
| ೧೨೯ | ೦ | ೦ |
| ೨೧ | ೨೭ | ೩೨೪ |
| ೧೦೮ | ೩೬ | ೨೭ಫೂ. |
| ೧೨೯ | ೬೩ | |
| | ೨೧ ಯಾರ್ಡು | |

ಆದರೆ ೩೬=೪×೯ ಆದ್ದರಿಂದ ಮೊದಲು ೪ ರಿಂದ ಬಳಿಕ ೯ ರಿಂದ ಗುಣಿಸಬೇಕು.

| | | |
|---|---|---|
| ೩ಯಾ. | ೧ಫೂ. | ೯ ಇ. |
| | | ×೪ |
| ೧೪ಯಾ. | ೧ಫೂ. | ೦ಇ. |
| | | ×೯ |
| ೧೨೯ಯಾ. | ೦ಫೂ. | ೦ಇ. |

(೧) ಅವಯವಗಳಿಂದ ಗುಣಿಸಿ ಇಲ್ಲವೆ (೨) ಉತ್ತರಕ್ಕೆ ಗುಣಕದಿಂದ ಭಾಗಿಸಿ ತಾಳೇ ನೋಡಬಹುದು.

**ಮಾ. ಲೆಕ್ಕ :— ೩೮.** ೪ ದಿ. ೧೫ ತಾಸು ೨ ಮಿನಿಟು ೩೦ ಸೆಕಂದು ಇದಕ್ಕೆ ೧೨೮ ರಿಂದ ಗುಣಿಸಿರಿ.

| | | | |
|---|---|---|---|
| ೪ ದಿ. | ೧೫ ತಾ. | ೨೦ ಮಿ. | ೩೦ ಸೆ. |
| | | | × ೧೨೮ |
| ೫೯೩ | ೧೯ | ೪೪ | ೦ |
| ೮೧ | ೪೩ | ೬೪ | ೧೦ \| ೩೮೪೦ |
| ೫೧೨ | ೧೨೮೦ | ೨೫೬೦ | ೬ \| ೩೮೪ |
| ೫೯೩ ದಿ. | ೬೪೦ | ೧೦ \| ೨೬೨೪ | ೬೪ ಮಿ. |
| | ೮ \| ೧೯೬೩ | ೬ \| ೨೬೨ ಬಾ. ೪ | ಬಾ. ೦ |
| | ೩ \| ೨೪೫ ಬಾ. ೩ | ೪೩ ತಾ. | |
| | ೮೧ದಿ ಬಾ. ೧೬ | ಬಾ. ೪೦ | |
| | ೧೯ ತಾ. | ೪೪ ಮಿನಿಟು | |

**ಮಾ. ಲೆಕ್ಕ :—೩೯.** ೨ ಸೇ. ೧೫ ತೊ. ೬ ಮಾ. ಬಂಗಾರದಲ್ಲಿ ೨೪ ಬಿಂದಲಿ ಮಾಡಿಸಿದರೆ ಪ್ರತಿಯೊಂದು ಬಿಂದಲಿಯ ತೂಕವು ಎಷ್ಟು?

ಒಟ್ಟು ಬಂಗಾರದಲ್ಲಿ ೨೪ ಭಾಗ ಮಾಡಬೇಕಾಗಿದೆ. ಆದ್ದರಿಂದ ಭಾಗಾಕಾರ. ೨೪=೪×೬ ಆದ್ದರಿಂದ ಮೊದಲು ೪ ರಿಂದ, ಬಳಿಕ ಬಂದದ್ದಕ್ಕೆ ೬ ರಿಂದ ಭಾಗಿಸಿ ಸಂಕ್ಷಿಪ್ತ ಭಾಗಾಕಾರದಿಂದ ಲೆಕ್ಕ ಮಾಡಬಹುದು.

೪ | ೨ ಸೇ. ೧೫ ತೊ. ೬ ಮಾ.

೬ | ೧೫ ೧೦ ೪ ಗು. ( ೨ ತೊ. ೭ ಮಾ. ೬ ಗು.)

೨ ೭ ೬ ಉತ್ತರ

**ಮಾ. ಲೆಕ್ಕ:— ೪೦.** ೨ ಮ. ೩. ಧ. ೩ ಸೇ. ತುಪ್ಪವನ್ನು ೧ ಧ. ೩ ಸೇರು ಹಿಡಿಯುವ ಎಷ್ಟು ಪಾತ್ರೆಗಳಲ್ಲಿ ಹಾಕಬಹುದು ?

ಇಲ್ಲಿ ಕೊಟ್ಟ ದೊಡ್ಡ ಪರಿಮಾಣವನ್ನು ಸಣ್ಣದರಿಂದ ಅಳೆಯುವದಿದೆ. ಆದ್ದರಿಂದ ಭಾಗಾಕಾರ. ಕೊಟ್ಟ ಪರಿಮಾಣಗಳಿಗೆ ಸೇರಿನ ರೂಪ ಕೊಟ್ಟು ಭಾಗಿಸಬೇಕು.

೨ ಮ. ೩ ಧ. ೩ ಸೇ. ೧ ಧ. ೩ ಸೇ= ೧೫ ಸೇ.
೮ ೧೩೨ ೧೩೫ ಸೇ.÷೧೫ ಸೇ= ೧೩೫÷೧೫= ೯
೧೧ ೧೩೫ ಸೇ. ೯ ಪಾತ್ರೆಗಳಲ್ಲಿ ಹಾಕಬಹುದು.

**ಲೆಕ್ಕಗಳ ಗುಂಪು:— ೫೭.** ( ಬಾಯಿಲೆಕ್ಕ )

೧. ಒಬ್ಬ ಹುಡಿಗೆಗೆ ೮ ಇ. ಉದ್ದ ಕಸೀದೆಯ ಅರಿವೆಯಂತೆ ಒಂದು ವರ್ಗದ ಎಲ್ಲ ಹುಡುಗೆಯರಿಗೆ ೧೬ ಯಾ. ಅರಿವೆ ಬೇಕಾದರೆ, ಅಲ್ಲಿ ಹುಡಿಗೆಯರು ಎಷ್ಟು ಇರುವರು ?

೨. ೨ ಮಿನಿಟುಗಳಲ್ಲಿ ೧ ಫರ್ಲಾಂಗ ನಡೆಯುವವನಿಗೆ ೨ ಮೈ. ೪ ಫ. ಹೋಗಲಿಕ್ಕೆ ಎಷ್ಟು ಹೊತ್ತುಬೇಕು ?

೩. ೧ ಹೆಜ್ಜೆಯ ಅಳತೆ ೨ ಫೂ. ೩ ಇ. ಆದರೆ ೨೫ ಹೆಜ್ಜೆಗಳ ಅಳತೆ ಎಷ್ಟು?

೪. ೧ ಫೂ. ೮ ಇ. ಅರಿವೆಯಲ್ಲಿ ಒಂದು ಸಣ್ಣ ಚೀಲವಾಗುವದು ? ೬ ಯಾ. ೪ ಇ. ಅರಿವೆಯಲ್ಲಿ ಎಷ್ಟು ಚೀಲಗಳಾಗುವವು ?

೫. ೧೨ ತಾಸುಗಳಲ್ಲಿ ೨೪ ಮಿನಿಟುಗಳ ಗುಂಪು ಎಷ್ಟು ಆಗುವವು ?

೬. ೪ ತೊಲೆ ೨ ಮಾಸಿ ಬಂಗಾರದಲ್ಲಿ ೪ ಗುಂಜಿ ತೂಕದ ಪದಕಗಳು ಎಷ್ಟು ಆಗುವವು ?

೭. ೨ ಮಣ ೨ ಧಡೆ ಬೆಲ್ಲದ ಪಾಕದಲ್ಲಿ ೨ ಸೇರು ಬೆಲ್ಲದ ಕುಡಿಕೆಗಳು ಎಷ್ಟು ಆಗುವವು ?

**ಲೆಕ್ಕಗಳ ಗುಂಪು:— ೫೮.**

೧. ಒಂದು ಓಣಿಯಲ್ಲಿ ಸಾಲಾಗಿ ೫ ಮನೆಗಳು ಇವೆ. ಪ್ರತಿಯೊಂದು ಮನೆಯು ೧೨ ಯಾ. ೨ ಫೂ. ೯ ಇ. ಉದ್ದವಿದ್ದರೆ ಆ ಓಣಿಯು ಎಷ್ಟು ಉದ್ದವಿದೆ ?

೨. ಒಂದು ಚಕ್ಕಡಿಯ ಗಾಲಿಯು ೭ ಫ. ೨೦೩ ಯಾ. ೪ ಇ. ಹೋದಾಗ ೨೯೬ ಸಾರಿ ತಿರುಗುವದು. ಅದರ ಸುತ್ತಳತೆ ಎಷ್ಟು?

೩. ಒಂದು ಕಡಾಯಿಯಲ್ಲಿ ೩ ಹೇ. ೫ ಮ. ೨ ಧ. ೪ ಸೇ. ಬೆಲ್ಲದ ಪಾಕ ವಿದೆ. ಅದನ್ನು ೧ ಮ. ೩ ಧ. ೩ ಸೇ. ತೂಕದ ಬೆಲ್ಲದ ಪೆಂಟಿಗಳಾಗಿ ಮಾಡಿದರೆ ಎಷ್ಟು ಪೆಂಟಿ ಆಗುವವು?

೪. ಒಬ್ಬನು ಕಾಲಗಾಡಿಯಿಂದ ೫ ಮಿ. ನಲ್ಲಿ ಒಂದು ಮೈಲು ಹೋಗುವನು. ಆದರೆ ೫ ತಾ. ೩೦ ಮಿ. ಗಳಲ್ಲಿ ಅವನು ಎಷ್ಟು ದೂರಹೋಗುವನು!

೫. ಒಬ್ಬ ಕಾರಕೂನನು ಮುಂಜಾನೆ ೬-೩೦ ರಿಂದ ಸಂಜೆಗೆ ೫-೪೫ ರ ವರೆಗೆ ಕಚೇರಿಯಲ್ಲಿ ಕೆಲಸ ಮಾಡುವನು. ನಡುವೆ ಒಂದು ತಾಸು ಮಾತ್ರ ಊಟಕ್ಕೆ ಹೋಗಿ ಬರುವನು. ಅವನು ವಾರದಲ್ಲಿ ಹೀಗೆ ೬ ದಿನ ದುಡಿದು ಒಂದು ಕೆಲಸ ಮುಗಿಸಿದರೆ, ಒಟ್ಟು ಆ ಕೆಲಸಕ್ಕೆ ಎಷ್ಟು ತಾಸು ಹತ್ತಿದಂತಾಯಿತು?

೬. ನಾವು ೬ ಖಂಡಿ ಕಟ್ಟಿಗೆ ಕೊಂಡೆವು. ಅದು ೪ ತಿಂ. ೨೭ ದಿ. ಸಾಕಾಯಿತು. ಅಂದರೆ ಪ್ರತಿದಿನ ಎಷ್ಟು ಕಟ್ಟಿಗೆ ಬೇಕಾದಂತಾಯಿತು?

(೨೮ ಪೌಂಡು ಅಥವಾ ೨ ಸ್ಟೋನು=೧ ಮಣ, ೨೮ ಮಣ=೧ ಖಂಡಿ).

ಮುಂದಿನ ಲೆಕ್ಕಗಳನ್ನು ಅವಯವಗಳ ಸಹಾಯದಿಂದ ಮಾಡಿರಿ.

| | | | ಅ | ಬ | ಕ | ಡ |
|---|---|---|---|---|---|---|
| ೭. | ೭ ಯಾ. ೨ ಫೂ. ೯ ಇ. | × | ೩೨, | ೫೪, | ೬೩, | ೭೨. |
| ೮. | ೫ ತಾ. ೨ ಮಿ. ೧೫ ಸೆ. | × | ೨೪, | ೪೨, | ೩೫, | ೫೬. |
| ೯. | ೭ ಮ. ೩ ಧ. ೨ ಶೇ. | × | ೧೨, | ೧೮, | ೪೦, | ೫೦. |
| ೧೦. | ೧೫ ತೊ. ೨ ಮಾ. ೫ ಗು. | × | ೯೫, | ೯೬, | ೧೧೨, | ೧೧೮. |
| ೧೧. | ೫ ಮೈ. ೩ ಫ. ೧೦೮ ಯಾ. | × | ೧೩೨, | ೧೪೪, | ೧೫೬, | ೧೬೪. |
| ೧೨. | ೩ ಶೇ. ೧ ಕಾ. ೧ ಗಿ. ೧ ಚ. | × | ೧೮೦, | ೨೧೫, | ೨೨೪, | ೩೦೮, |
| ೧೩. | ೮ ಹೇರು ೧ ಅ. ೫ ಸೊ. | × | ೨೪೦, | ೨೬೮, | ೩೦೦, | ೪೧೨. |
| ೧೪. | ೨೧೫ ಯಾ. ೨ ಫೂ. ೬ ಇ. | ÷ | ೧೨, | ೧೮, | ೨೪, | ೩೨. |
| ೧೫. | ೧೫ ದಿ. ೩ ತಾ. ೪೫ ಮಿ. | ÷ | ೧೧, | ೩೦, | ೪೫, | ೬೦. |
| ೧೬. | ೫ ಹೇ. ೪ ಮ. ೩ ಸೇ. | ÷ | ೩೬, | ೪೮, | ೬೪, | ೭೨. |
| ೧೭. | ೨ ಸೇ. ೧೮ ತೊ. ೭ ಮಾ. | ÷ | ೨೭, | ೧೮, | ೨೪, | ೩೫. |
| ೧೮. | ೪೩೬ ಮೈ. ೬ ಫ. ೧೧೨ ಯಾ. | ÷ | ೧೧೨, | ೧೪೪, | ೧೫೦, | ೧೬೪. |

# ವಿವಿಧ ಪರಿಮಾಣಗಳನ್ನು ಬರೆಯುವ ದೇಶಪದ್ಧತಿ.

## ( ರೇಖಾ ಅಪೂರ್ಣಾಂಕ )

೪ ಆಣೆ=೧ ಪಾವಲಿ=೧ ಕಾಲು ರೂ. = ·।·

೮ ಆಣೆ=೨ ಪಾವಲಿ=೧ ಅರ್ಧ ರೂ. = ·॥·

೧೨ ಆಣೆ=೩ ಪಾವಲಿ=೧ ಮುಕ್ಕಾಲು ರೂ. = ·।।।·

| | | |
|---|---|---|
| ೧ ಆಣೆ=༶- | ೧ ದುಡ್ಡು=༶༶। | ೩ ದುಡ್ಡು ೨ ಪೈ=༶༶।।।೨ |
| ೨ ಆಣೆ=༶= | ೨ ದುಡ್ಡು=༶༶॥ | ೪ ರೂ. ೫ ಆ. =೪।- |
| ೩ ಆಣೆ=༶≡ | ೩ ದುಡ್ಡು=༶༶।।। | ೮ ರೂ. ೧೫ ಆ. ೬ ಪೈ=೮।।।≡॥ |

### ಲೆಕ್ಕಗಳ ಗುಂಪು:— ೫೯.

ಕೆಳಗಿನ ಪರಿಮಾಣಗಳನ್ನು ದೇಶಪದ್ಧತಿಯಲ್ಲಿ ಬರಿಯಿರಿ.

| | ರೂ. | ಆ. | | ರೂ. | ಆ. | | ರೂ. | ಆ. | | ರೂ. | ಆ. |
|---|---|---|---|---|---|---|---|---|---|---|---|
| ೧. | ೨ | ೪ | ೨. | ೬ | ೧೨ | ೩. | ೯ | ೬ | ೪. | ೫ | ೮ |
| ೫. | ೭ | ೫ | ೬. | ೧೦ | ೭ | ೭. | ೭ | ೧೨ | ೮. | ೬ | ೧೧ |
| ೯. | ೯ | ೧೪ | ೧೦. | ೫ | ೧೦ | ೧೧. | ೮ | ೧೦ | ೧೨. | ೧೦ | ೧೫ |

| | ರೂ. | ಆ. | ದು. | | ರೂ. | ಆ. | ದು. | | ರೂ. | ಆ. | ದು. |
|---|---|---|---|---|---|---|---|---|---|---|---|
| ೧೩. | ೩ | ೧ | ೦ | ೧೪. | ೪ | ೩ | ೦ | ೧೫. | ೬ | ೧ | ೨ |
| ೧೬. | ೬ | ೫ | ೩ | ೧೭. | ೮ | ೧೧ | ೧ | ೧೮. | ೧೦ | ೧೩ | ೫ |
| | ರೂ. | ಆ. | ಪೈ. | | ರೂ. | ಆ. | ಪೈ. | | ರೂ. | ಆ. | ಪೈ. |
| ೧೯. | ೭ | ೬ | ೫ | ೨೦. | ೮ | ೭ | ೯ | ೨೧. | ೯ | ೧೧ | ೧೧ |
| ೨೨. | ೧ | ೩ | ೪ | ೨೩. | ೪ | ೨ | ೧ | ೨೪. | ೫ | ೮ | ೪ |

| | ರೂ. | ಆ. | ದು. | ಪೈ. | | ರೂ. | ಆ. | ದು. | ಪೈ. |
|---|---|---|---|---|---|---|---|---|---|
| ೨೫. | ೨ | ೯ | ೩ | ೨ | ೨೬. | ೭ | ೧೫ | ೧ | ೨ |

ಕೆಳಗೆ ಕೊಟ್ಟ ರೂ. ಪರಿಮಾಣಗಳನ್ನು ಓದಿ ಅಂಕೆಯಲ್ಲಿ ಬರೆಯಿರಿ.

| | ಅ. | ಬ. | ಕ. | ಡ. | ಇ. | ಫ. |
|---|---|---|---|---|---|---|
| ೨೭. | ೨। | ೩॥ | ೪।।। | ೨।- | ೩॥= | ೪।।।≡ |
| ೨೮. | ೫॥= | ೬।≡ | ೭।≡ | ೮।।।= | ೨॥।=॥ | ೩॥-।।। |

